# "ಮಾಯಾಲೋಕ : ಮೊದಲ ಓದು"

2006-2007ನೇ
ಸಾಲಿನ ಎಂ.ಫಿಲ್ ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ
ಅಧ್ಯಯನ ಪ್ರಬಂಧ


ಸಂಶೋಧಕರು:
ಈ.ರಮೇಶ್

ಮಾರ್ಗದರ್ಶಕರು:
ಡಾ.ಕುರುವ ಬಸವರಾಜ್









ಅಧ್ಯಯನ ಸಂಸ್ಥೆ:
'ಕಾವ್ಯಮಂಡಲ'
(ಕನ್ನಡ ವಿಶ್ವವಿದ್ಯಾಲಯದಿಂದ ಅಂಗೀಕೃತವಾಗಿದೆ)
ಕನ್ನಡ ಅಧ್ಯಯನ ಕೇಂದ್ರ
ಬಸವನಗುಡಿ, ಬೆಂಗಳೂರು-೦೪




*****

591

<u>ದೃಢೀಕರಣ ಪತ್ರ:</u>

**ಈ.ರಮೇಶ್** ಇವರು **'ಮಾಯಾಲೋಕ : ಮೊದಲ ಓದು'** ಎಂಬ ಶೀರ್ಷಿಕೆಯ ಈ ಅಧ್ಯಯನ ಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. **ಹಂಪಿ ಕನ್ನಡ ವಿಶ್ವವಿದ್ಯಾಲಯದ** ಭಾಷೆ ಮತ್ತು ಸಾಹಿತ್ಯ ನಿಕಾಯಕ್ಕೆ ಎಂ.ಫಿಲ್ ಪದವಿಗಾಗಿ ಸಲ್ಲಿಸುತ್ತಿರುವ ಈ ಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಲೀ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ದಿನಾಂಕ: 12/12/07
ಸ್ಥಳ: ಬೆಂಗಳೂರು

(ಡಾ.ಕುರುವಬಸವರಾಜು)

# ಪ್ರಮಾಣೀಕರಣ ಪತ್ರ

**'ಮಾಯಾಲೊಕ : ಮೊದಲ ಓದು'** ಎಂಬ ಶೀರ್ಷಿಕೆಯ ಈ ಅಧ್ಯಯನ ಪ್ರಬಂಧವನ್ನು 2006–2007ನೇ ಸಾಲಿನ ಎಂ.ಫಿಲ್ ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯದ ಭಾಷೆ ಮತ್ತು ಸಾಹಿತ್ಯ ನಿಕಾಯಕ್ಕೆ ಸಲ್ಲಿಸಲು ಡಾ.ಕುರುವಬಸವರಾಜು ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ.

ಪ್ರಸ್ತುತ ಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ವಿಶ್ವವಿದ್ಯಾಲಯದ ಯಾವುದೇ ಪದವಿಗಾಗಲೀ ಬಳಸಿಕೊಂಡಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ದಿನಾಂಕ: 12-12-07
ಸ್ಥಳ : ಬೆಂಗಳೂರು

(ಈ.ರಮೇಶ್)

# ಪರಿವಿಡಿ


| | |
|---|---|
| ಅಧ್ಯಯನದ ಉದ್ದೇಶಮತ್ತು ವ್ಯಾಪ್ತಿ | i |
| ಪ್ರಸ್ತಾವನೆ | v |
| ಅಧ್ಯಾಯ: ೧<br>ತೇಜಸ್ವಿ ಸಾಹಿತ್ಯ ಪರಿಚಯ | ೧ |
| ಅಧ್ಯಾಯ: ೨<br>'ಮಾಯಾಲೋಕ'ದ ಅಭಿವ್ಯಕ್ತಿ ತಂತ್ರ | ೧೭ |
| ಅಧ್ಯಾಯ: ೩<br>'ಮಾಯಾಲೋಕ'ದ ವಿನ್ಯಾಸ | ೨೭ |
| ಅಧ್ಯಾಯ: ೪<br>'ಮಾಯಾಲೋಕ'ದಲ್ಲಿ ಸಾಮಾಜಿಕತೆ | ೩೪ |
| ಅಧ್ಯಾಯ: ೫<br>'ಮಾಯಾಲೋಕ'ದಲ್ಲಿ ಪರಿಸರ | ೫೭ |
| ಅಧ್ಯಯನ ಸಾರ | ೬೯ |
| ಪರಾಮರ್ಶನ ಸಾಹಿತ್ಯ | ೭೧ |
| ಅನುಬಂಧ | ೭೨ |

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ತೇಜಸ್ವಿ ಕನ್ನಡದ ಅತ್ಯಂತ ವಿಶಿಷ್ಟ ಬರಹಗಾರರು. ಸಾಹಸ, ಪತ್ತೇದಾರಿಕೆ ಹಾಗೂ ವಿಸ್ಮಯದ ಗುಣಗಳಿಂದ ತೇಜಸ್ವಿ ಸಾಹಿತ್ಯ ನೂರಾರು ಸಂಖ್ಯೆಯಲ್ಲಿ ಹೊಸ ಓದುಗರನ್ನು ತನ್ನತ್ತ ಸೆಳೆಯಿತು. ಸಾಹಿತ್ಯದ ಓದುಗರನ್ನೂ ಒಳಗೊಂಡಂತೆ ಸಾಮಾನ್ಯ ಜನರನ್ನೂ ಓದಿಗೆ ಹಚ್ಚುವಂತೆ ಮಾಡಿದ್ದು ತೇಜಸ್ವಿ ಸಾಹಿತ್ಯದ ನಿಜವಾದ ತಾಕತ್ತು. ತೇಜಸ್ವಿ, ಸಾಹಿತ್ಯದ ಗಂಧಗಾಳಿ ಇಲ್ಲದವರಿಗೂ ಸಾಹಿತ್ಯದ ರುಚಿ ಹತ್ತಿಸಿದರು. ದಟ್ಟವಾದ ಅನುಭವಗಳನ್ನು ಸರಳ ನಿರೂಪಣೆಯ ಮೂಲಕ ಅತ್ಯಂತ ಸಹಜವಾಗಿ ಓದುಗರಿಗೆ ತೇಜಸ್ವಿ ಸಾಹಿತ್ಯ ಮುಖಾಮುಖಿಯಾಗಿಸುತ್ತದೆ.

ಅನುಭವಗಳ ಕಣಜವೇ ಅಗಿರುವ ತೇಜಸ್ವಿ ಸಾಹಿತ್ಯವನ್ನು ತಾತ್ವಿಕ ಅಡಕತ್ತರಿಗೆ ಸಿಲುಕಿಸದೆ, ಸಿದ್ಧಾಂತಗಳ ಸುಳಿಯಲ್ಲಿ ಮುಳುಗಿಸದೆ, ವಿಮರ್ಶೆಯ ಮಾನದಂಡಗಳನ್ನು ಝಳಪಿಸದೆ, ಪದ ಪಾಂಡಿತ್ಯವನ್ನು ಪ್ರದರ್ಶಿಸದೆ ಒಬ್ಬ ಓದುಗನ ನೆಲೆಯಲ್ಲಿ ಅತ್ಯಂತ ಸಹಜವಾಗಿ ಓದಿನ ಅನುಭವಗಳನ್ನು ದಾಖಲಿಸುವುದೇ ಈ ಅಧ್ಯಯನದ ಉದ್ದೇಶ. ಈ ರೀತಿಯಲ್ಲಿ ನೋಡುವುದಾದರೆ ಇದನ್ನು ಅಧ್ಯಯನ ಎಂದೇನು ಪರಿಗಣಿಸುವ ಅಗತ್ಯವಿಲ್ಲ. ಏಕೆಂದರೆ ಅಧ್ಯಯನದ ಯಾವ ಘನಕಾರ್ಯಗಳೂ ಇಲ್ಲಿ ನಡೆದಿದೆ ಎಂದು ನನಗನ್ನಿಸುವುದಿಲ್ಲ. ಓದುಗನಾಗಿ ನನ್ನ ಪ್ರತಿಕ್ರಿಯೆಗಳನ್ನು ದಾಖಲಿಸುವುದಕ್ಕಷ್ಟೇ ನನ್ನ ನಿಷ್ಠೆ.

ನನ್ನ ಅಧ್ಯಯನದ ಉದ್ದೇಶವನ್ನು ಸಾದರಪಡಿಸುವುದಕ್ಕೆ ಮುಂಚೆ ಕನ್ನಡ ವಿಮರ್ಶೆಯ ವಿಮರ್ಶಾ ವಿಧಾನವನ್ನೊಮ್ಮೆ ಅವಲೋಕಿಸುವ ಅಗತ್ಯವಿದೆ ಎನಿಸುತ್ತದೆ. ಮಾಯಾಲೊಕದ ಮೇಲೆ ಬಂದ ವಿಮರ್ಶೆಯೊಂದಕ್ಕೆ ಪ್ರತಿಕ್ರಿಯಿಸುತ್ತಾ ಇಂದಿನ ಗೋಜಲುಮಯ ವಿಮರ್ಶೆಗಳನ್ನು ಕುರಿತು ತೇಜಸ್ವಿ ಹೀಗೆ ಬರೆಯುತ್ತಾರೆ "ಕೃತಿಯನ್ನು ಹಿಂಜಿ ಹಿಂಜಿ ಅದರಲ್ಲಿ ಹುದುಗಿರುವ ಪರೋಕ್ಷಾರ್ಥವನ್ನು ಹುಡುಕುತ್ತಾ ಹೋದರೆ ಕೊನೆಗೆ ಆ ಗೋಜಲುಗಳಲ್ಲಿ ನೀವು ಕಳೆದೇ ಹೋಗುತ್ತೀರಿ! ಪದಗಳಿಗೆ, ಭಾಷೆಗೆ, ಗದ್ಯಕ್ಕೆ, ಕಥನಕ್ಕೆ ಆನುಷಂಗಿಕವಾಗೇ ಇರುವ ಧ್ವನ್ಯರ್ಥವನ್ನು ನಾವು ವ್ಯಕ್ತವಾಗಿ ವಿವರಿಸುತ್ತಾ ಹೋಗುವುದರಿಂದ ನನ್ನ ಕಥೆಗಾಗಲೀ ನಿಮ್ಮ ವಿಮರ್ಶೆಗಾಗಲೀ ಹೊಸ ಆಯಾಮವೇನೂ ದೊರೆಯದಿದ್ದರೆ ಅದರಿಂದ ಪ್ರತಿಕೂಲ ಪರಿಣಾಮವಾಗುವುದೇ ಹೆಚ್ಚು. ಇದು ವಿಮರ್ಶಕನ ಚಾತುರ್ಯ. ಇವನು ಯಾವುದನ್ನು ಬೇಕಾದರೂ ಹೇಗೆ ಬೇಕಾದರೂ ವ್ಯಾಖ್ಯಾನಿಸಬಲ್ಲ ಚತುರ ಎಂದು ಓದುಗನಿಗೆ ಒಮ್ಮೆ ಗುಮಾನಿ ಬಂದರೆ ಸಾಕು. ಅಷ್ಟರ ಮಟ್ಟಿಗೆ ನಾವು ಅವರ ವಿಶ್ವಾಸಾರ್ಹತೆಯನ್ನು ಕಳೆದುಕೊಳ್ಳುತ್ತೇವೆ"1 ವಿಮರ್ಶಕನ ಬುದ್ಧಿವಂತಿಕೆ ಹಾಗೂ ಸಮರ್ಥನಾ ಚಾತುರ್ಯವನ್ನು ತೇಜಸ್ವಿ ಇಲ್ಲಿ ಪ್ರಸ್ತಾಪಿಸುತ್ತಲೇ ಅದರ ಹಿಂದಿನ ಅಪಾಯಗಳನ್ನೂ ಗುರ್ತಿಸುತ್ತಿದ್ದಾರೆ. ಒಬ್ಬ ಚತುರ ವಿಮರ್ಶಕ ತಾನು ಓದಿದ ಕೃತಿಯಲ್ಲಿ ತನಗೆ ಅನಿಸಿದ್ದನ್ನು ಹೇಗೆ ಬೇಕಾದರೂ ಸಮರ್ಥಿಸಿಕೊಳ್ಳಬಲ್ಲ. ತನ್ನ ಅಭಿಪ್ರಾಯಗಳಿಗೆ ತಾತ್ವಿಕತೆಯ ಚೌಕಟ್ಟು ರೂಪಿಸಿ ಪ್ರೌಢ ಭಾಷೆಯಿಂದ ಅಲಂಕರಿಸಿ ಆ ಅಭಿಪ್ರಾಯಗಳನ್ನು ಇತರರು 'ಮಹತ್ವ' ಎಂದು ಭಾವಿಸಲು ಬೇಕಾದ ವಾತಾವರಣವನ್ನು ನಿರ್ಮಿಸಬಲ್ಲ. ಅಲ್ಲದೆ 'ಸಾಹಿತ್ಯ ಕೃತಿಯೊಂದು ನೂರಾರು ಓದುಗರಲ್ಲಿ ನೂರಾರು ಸಂಖ್ಯೆಯಲ್ಲಿ ಮರುಸೃಷ್ಟಿಯಾಗಲು ಸಾಧ್ಯ' ಎಂಬ ನಂಬಿಕೆ ಈ

ವಿಮರ್ಶೆಗೆ ಮಹತ್ವ ಕೊಡಲೇಬೇಕಾದ ಅನಿವಾರ್ಯತೆಯನ್ನು ಸೃಷ್ಟಿಸುತ್ತದೆ. ಹೀಗಾಗಿ ನಾವು ಯಾವ ವಿಮರ್ಶೆಗಳನ್ನೂ ಇದು ಹೀಗಲ್ಲ ಎಂದು ನಿರಾಕರಿಸಲು ಸಾಧ್ಯವೇ ಇಲ್ಲ. ಆದ್ದರಿಂದ ವಿಮರ್ಶಕರು ಸ್ವತಃ ಅರಿತುಕೊಂಡು ವಿಮರ್ಶೆಗಳನ್ನು ತಮ್ಮ ಪಾಂಡಿತ್ಯ ಪ್ರದರ್ಶನಕ್ಕೆ ಬಳಸಿಕೊಳ್ಳದೆ ಒಂದು ಸಾಹಿತ್ಯ ಅಥವಾ ಅನುಭವದ ಹಿನ್ನೆಲೆಯ ಕೃತಿಯನ್ನು ಸಹಜ, ಸರಳ ನೆಲೆಯಲ್ಲಿ ಅನುಭವ ಕೇಂದ್ರಿತವಾಗಿ ನಿರೂಪಿಸಬೇಕಿದೆ.

"ಇನ್ನೊಂದು ಮುಖ್ಯವಾದ ಅಂಶವೆಂದರೆ ನಮ್ಮ ಕೃತಿವಿಮರ್ಶೆ ಆ ಕೃತಿ ಎಷ್ಟು ಸುಲಭಗ್ರಾಹ್ಯ, ಎಷ್ಟು ಸುಂದರ, ಎಷ್ಟು ಚೈತನ್ಯಪೂರ್ಣ ಎನ್ನುವುದನ್ನು ಓದುಗರಿಗೆ ತೋರಿಸಿ, ಕೃತಿ ಓದುವುದರ ಬಗ್ಗೆ ಲವಲವಿಕೆ ಹುಟ್ಟಿಸಬೇಕಲ್ಲವೇ? ವಿಶ್ಲೇಷಣ ವಿಧಾನದಲ್ಲಿ ನಾವು 'ಕಾದಂಬರಿ ಗೂಡಾರ್ಥಗಳ ಮೊಟ್ಟೆ' ಎನ್ನುವಂತೆ ಬಿಂಬಿಸಿದರೆ ಸರಳ ನೇರ ನಿರೂಪಣೆಗಳು ಸಹ ಓದುಗರಿಗೆ ಕ್ಲಿಷ್ಟ ಒಗಟುಗಳಾಗಿ ಬಿಡುತ್ತವೆ".2 ಇಲ್ಲಿ ಕನ್ನಡ ವಿಮರ್ಶೆಯ ಕ್ಲಿಷ್ಟಮಯತೆ, ಸರಳ ಕೃತಿಯೊಂದನ್ನು ಸಂಕೀರ್ಣವಾಗಿ ನೋಡುವ ಕ್ರಮವನ್ನು ತೇಜಸ್ವಿ ಟೀಕಿಸಿದ್ದಾರೆ. ಅಲ್ಲದೆ ಕನ್ನಡ ವಿಮರ್ಶೆ ತನ್ನ ಗೂಡಾರ್ಥಗಳನ್ನು ಅನ್ವೇಷಿಸುವ ಜಾಡಿನಿಂದ ಹೊರಬಂದು ಸರಳ, ಸುಲಭಗ್ರಾಹ್ಯ ನಿರೂಪಣೆಯ ಕಡೆ ಹೊರಳಬೇಕಾದ ಅಗತ್ಯವನ್ನು ಒತ್ತಿ ಹೇಳಿದ್ದಾರೆ. ಕೃತಿಯಲ್ಲಿ ವ್ಯಕ್ತವಾಗಿರುವ ಅನುಭಗಳಿಗೆ ತಮ್ಮ ಅನುಭವಗಳನ್ನು ಮುಖಾಮುಖಿಯಾಗಿಸಿ ಹೊರಡುವ ಹೊಸ ಸಂವೇದನೆಯನ್ನು ಓದುಗರಿಗೆ ತಲುಪಿಸುವ ಗುರುತರ ಜವಾಬ್ದಾರಿಯನ್ನು ಕನ್ನಡ ವಿಮರ್ಶೆ ಹೊರಬೇಕಿದೆ. ಇಲ್ಲವಾದರೆ ಅದು ತನ್ನ ಪಾಂಡಿತ್ಯ ಕೂಪದಿಂದ ಹೊರಬರಲಾಗದೆ ಅಲ್ಲೇ ಹೊರಳಾಡಬೇಕಾಗುತ್ತದ್ದೆ.

ನವಿರಾದ ಭಾವನೆಗಳನ್ನು ಸ್ಫುರಿಸಬಲ್ಲ, ಸೂಕ್ಷ್ಮವಾದ ಮಾನಸಿಕ ಸಂವೇದನೆಯೊಂದನ್ನು ನಿರ್ಮಿಸಬಲ್ಲ ಘಟನೆಗಳನ್ನು ಅಷ್ಟೇ ಸೂಕ್ಷ್ಮವಾಗಿ, ನವಿರಾಗಿ ವಿವರಿಸದೆ ಅದಕ್ಕೆ ಕ್ಲಿಷ್ಟವಾದ ಸಿದ್ಧಾಂತಗಳನ್ನು ಅಳವಡಿಸಿ ಓದುಗರನ್ನು ದಾರಿತಪ್ಪಿಸುವ ಕನ್ನಡ ವಿಮರ್ಶೆ ಬೇರೆಯದೇ ಹಾದಿಯನ್ನು ತುಳಿಯುವ ಅಗತ್ಯವಿದೆ. ವಿಮರ್ಶೆ ಎನ್ನುವುದು ಕೃತಿಯೊಂದರ ಗುಣಾವಗುಣಗಳನ್ನು ಹೇಳಿ ಅದರ ಮೌಲ್ಯ ನಿರ್ಣಯಿಸುವುದು ಎಷ್ಟು ಮುಖ್ಯವೋ ಓದುಗರಿಗೆ ಆ ಕೃತಿಯನ್ನು ಓದಿ ಅನುಭವಿಸಲು ಬೇಕಾದ ದಾರಿಗಳನ್ನು ತೋರಿಸುವುದು ಅಷ್ಟೇ ಮುಖ್ಯ. ಒಟ್ಟರ್ಥದಲ್ಲಿ ವಿಮರ್ಶೆ ಎನ್ನುವುದು ಓದುಗರಿಗೆ ಕೃತಿಯ ಓದಿಗೆ ಮಾರ್ಗದರ್ಶನ ನೀಡಬೇಕು. ಮತ್ತು ಮೂಲಕೃತಿಯನ್ನು ಓದಲೇಬೇಕಾದ ಸ್ಫೂರ್ತಿ ಅಥವಾ ಅನಿವಾರ್ಯತೆಯನ್ನು ಸೃಷ್ಟಿಸಬೇಕು. ಅದನ್ನು ಬಿಟ್ಟು ಸಹಜ ಕೃತಿಯೊಂದಕ್ಕೆ ಕ್ಲಿಷ್ಟ ಸಿದ್ಧಾಂತಗಳನ್ನು ಅನಗತ್ಯವಾಗಿ ಅನ್ವಯಿಸಿ ಅದೇ ತಮ್ಮ ಘನ ಪಾಂಡಿತ್ಯ ಎಂದು ಭಾವಿಸುವ ಮತ್ತು ಓದುಗರನ್ನು ದಾರಿ ತಪ್ಪಿಸುವ ವಿಮರ್ಶಕರು ಈ ನಿಟ್ಟಿನಲ್ಲಿ ಯೋಚಿಸಬೇಕಿದೆ. ಹಾಗಾಗಿ 'ಓದುಗ ಕೇಂದ್ರಿತ' ಅಥವ ಓದುಗನ ನೆಲೆಯಲ್ಲಿ ಕೃತಿಯನ್ನು ನೋಡುವ ಹೊಸ ಪರಂಪರೆ ಕನ್ನಡದಲ್ಲಿ ಬೆಳೆಯಬೇಕಿದೆ.

ಕನ್ನಡದಲ್ಲಿ ಕೆಲವು ವಿಮರ್ಶಕರು ಈ ನಿಟ್ಟಿನಲ್ಲಿ ಪ್ರಯತ್ನ ನಡೆಸಿರುವುದನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಆದರೆ ನಮ್ಮ ವಿಮರ್ಶಾಲೋಕ ಇಂಥ ವಿಮರ್ಶೆಗಳನ್ನು ಅಷ್ಟು ಮಾನ್ಯ ಮಾಡಿದಂತೆ ಕಾಣುವುದಿಲ್ಲ. ಇಂಥ ವಿಮರ್ಶೆಗಳನ್ನು ಕೇವಲ ಅವರ ವೈಯಕ್ತಿಕ ಅನುಭವವಷ್ಟೇ ಎಂಬಂತೆ ಪರಿಭಾವಿಸಿ ಅದನ್ನು ನಗಣ್ಯ ಮಾಡಿದೆ. ವಿಮರ್ಶೆಗಳೂ ಕೂಡ ಸಾಹಿತ್ಯ ಕೃತಿಯಂತೆ

ಓದಿಸಿಕೊಳ್ಳಬೇಕು. ಹೀಗಾಗಲು ಅದು ಸಹಜ ನೆಲೆಯಲ್ಲಿ ಅನುಭವಗಳ ಮುಖಾಮುಖಿಯಾಗಿರಬೇಕು. ಉದಾಹರಣೆಗೆ ಕಾದಂಬರಿಯಲ್ಲಿ ನಮ್ಮ ನೆನಪುಗಳನ್ನು ಕೆದಕಬಲ್ಲಂಥ ಚಿತ್ರಣವಿದ್ದರೆ ವಿಮರ್ಶಕ ಆ ಚಿತ್ರಣವನ್ನು ತಾನೂ ಒಬ್ಬ ಓದುಗನಾಗಿ ಅನುಭವಿಸಿ ಆ ಚಿತ್ರಣವನ್ನು ಓದಿದ ಮೇಲೆ ತಮಗೆ ಉಂಟಾದ ಅನುಭವಗಳನ್ನು ಕಥನ ಕ್ರಮದಲ್ಲಿ ನಿರೂಪಿಸಿ, ಅದಕ್ಕೆ ಸಂಬಂಧಿಯಾದ ಅಥವಾ ಸಮೀಪವಾದ, ತಾನು ಕಂಡಿರುವ–ಕೇಳಿರುವ ಅಂಥದೇ ಕ್ರಿಯೆಗಳನ್ನು ನಿರೂಪಿಸಿದರೆ ಓದುಗರಿಗೂ ಅದು ವಿಮರ್ಶೆ ಎನ್ನಿಸದೆ ಅದೇ ಹೊಸದೊಂದು ಕಥನವಾಗಿ ಹೊಸ ಸಂವೇದನೆಯನ್ನು ಉಂಟುಮಾಡುತ್ತದೆ. ಅಲ್ಲದೆ ಮೂಲ ಕೃತಿಯನ್ನು ಓದಬೇಕೆಂಬ ಆಸೆಯನ್ನು ಹುಟ್ಟಿಸುತ್ತದೆ. ಈ ನಿಟ್ಟಿನಲ್ಲಿ ಕನ್ನಡ ವಿಮರ್ಶೆ ಯಶಸ್ವಿಯಾದರೆ ಅಷ್ಟರಮಟ್ಟಿಗೆ ವಿಮರ್ಶೆ ಎನ್ನುವುದು ತನ್ನ ಶುಷ್ಕತೆಯಿಂದ ಹೊರಬರಬಹುದು. ಅದಕ್ಕಿಂತ ಮುಖ್ಯವಾಗಿ ವಿಮರ್ಶೆ ಎನ್ನುವ ಕಬ್ಬಿಣದ ಕಡಲೆ ಪಂಡಿತ–ಪಾಮರ ವಲಯವನ್ನು ದಾಟಿ ಸಾಮಾನ್ಯ ಓದುಗರ ವಲಯಕ್ಕೆ ಹತ್ತಿರವಾಗಲು ಸಾಧ್ಯ. ಆಗ ವಿಮರ್ಶೆ ಎನ್ನುವುದು ಕೇವಲ ಬೌದ್ಧಿಕತೆಯ ಪ್ರದರ್ಶನವಾಗದೆ ಸೃಜನಶೀಲ ಮರುಸೃಷ್ಟಿಯೂ ಆಗಲು ಸಾಧ್ಯ.

ಈ ಅಂಶಗಳನ್ನು ಹಿನ್ನೆಲೆಯಾಗಿ ಇಟ್ಟುಕೊಂಡು, ವಿಮರ್ಶೆ ಎನ್ನುವುದು 'ಹೀಗಿದ್ದರೆ ಚೆನ್ನ' ಎಂದು ನಂಬಿ, ತೇಜಸ್ವಿಯವರ 'ಮಾಯಾಲೋಕ'ವನ್ನು ಹೊಕ್ಕಿದ್ದೇನೆ. ಮಾಯಾಲೋಕವನ್ನು ಓದುಗನ ನೆಲೆಯಲ್ಲಿ ನನ್ನ ಮೊದಲ ಓದಿನ ಅನುಭವಗಳನ್ನು ದಾಖಲಿಸುವುದು ಇಲ್ಲಿನ ಉದ್ದೇಶ. ಆದರೆ ಓದುಗನೊಬ್ಬನ ಅನುಭವಗಳನ್ನು ದಾಖಲಿಸುತ್ತಿರುವ ಈ ಕಾರ್ಯ ಕೇವಲ ಅಷ್ಟಕ್ಕೇ ಸೀಮಿತವಲ್ಲ ಎಂದು ನಾನು ಭಾವಿಸುತ್ತೇನೆ. ಕಾದಂಬರಿಯನ್ನು ಅಥವಾ ಇನ್ನಾವುದೇ ಕಥನಗಳನ್ನು, ವಿಶೇಷವಾಗಿ ತೇಜಸ್ವಿ ಸಾಹಿತ್ಯವನ್ನು ನೋಡಲು ಬೇಕಾದ ಹೊಸ ಮಾರ್ಗವನ್ನು ಶೋಧಿಸುವುದು, ಆ ಮೂಲಕ ವಿಮರ್ಶಕರು ತೇಜಸ್ವಿ ಸಾಹಿತ್ಯವನ್ನು ಹೊಸದೊಂದು ವಿಮರ್ಶಾ ವಿಧಾನದಲ್ಲಿ ನೋಡಲು ಬೇಕಾದ ಹೊಳಹುಗಳನ್ನು ಹೊಳೆಸುವಂಥ ಉದ್ದೇಶದೊಂದಿಗೆ ಪ್ರಯತ್ನಶೀಲನಾಗಿದ್ದೇನೆ.

ಈ ನಿಟ್ಟಿನಲ್ಲಿ ತೇಜಸ್ವಿ ಸಾಹಿತ್ಯವನ್ನು ನೋಡುವ ಅಗತ್ಯವಿದೆ. ಡಾ.ಚಂದ್ರಶೇಖರ ನಂಗಲಿಯವರು ತೇಜಸ್ವಿ ಸಾಹಿತ್ಯದ ಮೇಲೆ ಇಂಥ ಪ್ರಯೋಗ ನಡೆಸಿದ್ದಾರೆ. ಅವರು 'ಸಮುದಾಯ ವಾರ್ತಾ ಪತ್ರ'ದಲ್ಲಿ ಮಾಯಾಲೋಕದ ಮೇಲೆ ವ್ಯಕ್ತಪಡಿಸಿರುವ ಅಭಿಪ್ರಾಯಗಳು ಈ ನಿಟ್ಟಿನಲ್ಲಿ ಹೊಸ ಪ್ರಯತ್ನ ಎನ್ನಬಹುದು. ತೇಜಸ್ವಿ ಸಾಹಿತ್ಯ ಸಾಹಸಿಯೊಬ್ಬನ ಸಾಹಸಯಾತ್ರೆಯ ಸಾಹಸಗಾಥೆ ಎಂದರೆ ತಪ್ಪಿಲ್ಲ. ಸಾಹಸ ಪ್ರವೃತ್ತಿಯಿರುವ ಮತ್ತು ಕಾಡು–ಮೇಡುಗಳಲ್ಲಿ ಆಸಕ್ತಿಯಿರುವ ನನ್ನಂಥ ಅನೇಕ ಓದುಗರಿಗೆ ತೇಜಸ್ವಿ ಕಥನಗಳು ಅನುಭವದ ರಸಾಯನವನ್ನು ಉಣಬಡಿವುದರಲ್ಲಿ ಎರಡು ಮಾತಿಲ್ಲ. ಸಾಹಸಕ್ರೀಡೆ ಮತ್ತು ಕಾಡು, ಬೆಟ್ಟ, ಗುಡ್ಡ ಕಣಿವೆ–ಕಂದರಗಳಲ್ಲಿ ಅಪಾರ ಆಸಕ್ತಿ ಹೊಂದಿರುವ ನನಗೆ ತೇಜಸ್ವಿಯವರ ಮಾಯಾಲೋಕ ಹೊಸ ಅನುಭವ ಲೋಕವನ್ನೇ ತೆರೆದಿದೆ. ನನ್ನ ಈ ಅನುಭವಗಳನ್ನು ಯಾವುದೇ ಪದಾಡಂಬರವಿಲ್ಲದೆ ಸರಳ ಭಾಷೆಯಲ್ಲಿ, ಸಹಜವಾಗಿ ಇಲ್ಲಿ ದಾಖಲಿಸಲು ಹೊರಟಿದ್ದೇನೆ. ಇದು ನನ್ನಂಥಹ ಆಸಕ್ತಿಯಿರುವ ಬಹುತೇಕ ಓದುಗರ ಅನುಭವವೂ ಆಗಿರುವ ಸಾಧ್ಯತೆ ಇರುವುದರಿಂದ ಇದು ವೈಯಕ್ತಿಕ ನೆಲೆಯಿಂದ ಮೇಲೇರಬಲ್ಲದು ಎನ್ನಲು ಅಡ್ಡಿಯಿಲ್ಲ.

ಓಮಗ ನೆಲೆಯಲ್ಲಿ ತೇಜಸ್ವಿ ಸಾಹಿತ್ಯದ ಅನುಭವಗಳನ್ನು ದಾಖಲಿಸುವ ಕಾರ್ಯ ತೇಜಸ್ವಿ ಸಾಹಿತ್ಯ ಹೇಗೆ ವಾಸ್ತವ ಬದುಕಿಗೆ ಸ್ಪಂದಿಸಬಲ್ಲದು ಎಂಬುದನ್ನು ಶೋಧಿಸುವ ನೈಜ ಮಾರ್ಗ ಎಂದು ನನಗನ್ನಿಸುತ್ತದೆ

---

**ಅಡಿ ಟಿಪ್ಪಣಿ**

೧. 'ಸಮುದಾಯ ವಾರ್ತಾ ಪತ್ರ', ಫೆಬ್ರವರಿ ೨೦೦೭, ಡಾ.ಚಂದ್ರಶೇಖರ ನಂಗಲಿಯವರ 'ಮಾಯಾಲೋಕದೊಳಗೊಂದು ಸುತ್ತಾಟ' ಲೇಖನಕ್ಕೆ 'ತೇಜಸ್ವಿಯವರ ಪ್ರತಿಕ್ರಿಯೆ'- ಪುಟ ೧೮

2. 'ಸಮುದಾಯ ವಾರ್ತಾ ಪತ್ರ', ಫೆಬ್ರವರಿ ೨೦೦೭, ಡಾ.ಚಂದ್ರಶೇಖರ ನಂಗಲಿಯವರ 'ಮಾಯಾಲೋಕದೊಳಗೊಂದು ಸುತ್ತಾಟ' ಲೇಖನಕ್ಕೆ 'ತೇಜಸ್ವಿಯವರ ಪ್ರತಿಕ್ರಿಯೆ'- ಪುಟ ೧೯

*****

# ಪ್ರಸ್ತಾವನೆ:

ಕೆ.ಪಿ.ಪೂರ್ಣಚಂದ್ರ ತೇಜಸ್ವಿ ಕನ್ನಡ ಸಾರಸ್ವತ ಲೋಕದ ಬಹುಮುಖ ಮತ್ತು ಬಹುಶ್ರುತ ಪ್ರತಿಭೆ. ಕನ್ನಡದ ಮೇರು ಕವಿ, ಮೊದಲಾಗಿ ರಾಷ್ಟ್ರಕವಿ ಕುವೆಂಪು ಅವರ ಮಗನಾಗಿದ್ದರೂ ಯಾವುದೇ ಹಮ್ಮು ಬಿಮ್ಮು ತೋರದೆ ತಂದೆಯ ನೆರಳಿನಿಂದ ಹೊರಬಂದು ತಮ್ಮದೇ ವಿಶಿಷ್ಟ ಹಾದಿ ಹಿಡಿದವರು ತೇಜಸ್ವಿ. ಪ್ರಕೃತಿ ಮತ್ತು ಅದರೊಂದಿಗಿನ ಮಾನವ ಸಂಬಂಧದ ಒಡನಾಟಗಳಲ್ಲಿ ತೇಜಸ್ವಿಗೆ ಅಪ್ರತಿಮ ಒಲವಿತ್ತು. ಆದ್ದರಿಂದಲೇ ಅವರ ಬಹುತೇಕ ಬರಹಗಳಲ್ಲಿ ಪ್ರಕೃತಿ ಮತ್ತು ಪ್ರಕೃತಿ ಸಂಬಂಧಿತ ಘಟನೆಗಳೇ ಪ್ರಮುಖ ಪಾತ್ರ ವಹಿಸಲು ಸಾಧ್ಯವಾಯಿತು.

ತಣಿಯದ ಶಿಶು ಸಹಜ ಕುತೂಹಲ ಮತ್ತು ವಿಸ್ಮಯ ತೇಜಸ್ವಿ ಸಾಹಿತ್ಯದ ಜೀವದ್ರವ್ಯ. ಸಾಹಸ ಮನೋಭಾವದವರಾಗಿದ್ದ ತೇಜಸ್ವಿ, ಸದಾ ಕಾಡು ಮೇಡುಗಳಲ್ಲಿ ಅಲೆದಾಡುತ್ತಿದ್ದರು. ಕೋವಿ ಹಿಡಿದು ಪ್ರಾಣಿಗಳ ಬೆನ್ನು ಹತ್ತುತ್ತಿದ್ದರು. ಹಕ್ಕಿಗಳ ಒಂದು ಒಳ್ಳೆ ಫೋಟೋಗಾಗಿ ತಪಸ್ವಿಯಾಗುತ್ತಿದ್ದರು. ನೀರಿಗೆ ಗಾಳ ಹಾಕಿ ದಿನಗಟ್ಟಲೆ ತಾಳ್ಮೆಯಿಂದ ಕಾಯುತ್ತಿದ್ದರು. ಮೀನು ಹಿಡಿಯುವುದು ಅವರಿಗೆ ಒಂದು ಹುಚ್ಚು ಅಷ್ಟೆ. ಸಣ್ಣ ಮೀನುಗಳು ಗಾಳಕ್ಕೆ ಬಿದ್ದರೆ ಅವನ್ನು ಮತ್ತೆ ನೀರಿಗೇ ಬಿಟ್ಟು ದೊಡ್ಡ ಮೀನಿಗಾಗಿ ಗಾಳ ಹಾಕುತ್ತಿದ್ದರು. ಒಟ್ಟಾರೆ ಅವರ ಆಸಕ್ತಿ, ಹವ್ಯಾಸಗಳು ಹೆಚ್ಚು ತಾದಾತ್ಮತೆ ಮತ್ತು ಸಾಹಸವನ್ನು ಬೇಡುವಂಥವಾಗಿದ್ದವು. ಈ ಗುಣಗಳೇ ತೇಜಸ್ವಿ ಪ್ರಕೃತಿಯಲ್ಲಿ ಅಷ್ಟು ಬೆರೆಯಲು ಪ್ರೇರಣೆ ನೀಡಿದವು. ಇವರ ಆಸಕ್ತಿ ಇಷ್ಟಕ್ಕೇ ಸೀಮಿತವಾಗಿರಲಿಲ್ಲ. ಫೋಟೋಗ್ರಫಿ ಅವರ ಮತ್ತೊಂದು ಮೆಚ್ಚಿನ ಹವ್ಯಾಸವಾಗಿತ್ತು. ಕ್ಯಾಮೆರಾವನ್ನು ಹೆಗಲಿಗೇರಿಸಿ ಹೊರಟರೆಂದರೆ ಹಕ್ಕಿಗಳ ಪೋಸ್ಗಾಗಿ ಗಂಟೆಗಟ್ಟಲೆ ಕಾಯುತ್ತಿದ್ದರು. ಅವರ ಈ ತಾದಾತ್ಮತೆಯಿಂದಾಗಿಯೇ ಅವರೊಬ್ಬ ಅತ್ಯುತ್ತಮ ಛಾಯಾಗ್ರಾಹಕರಾಗಿ ಹೊರ ಹೊಮ್ಮಿದ್ದರು. ಒಟ್ಟಿನಲ್ಲಿ ಯಾವಾಗಲೂ ಹೊಸತನದ ಹುಡುಕಾಟದಲ್ಲಿ ತೊಡಗಿರುತ್ತಿದ್ದರು. ಹೀಗಾಗಿ ಇವರ ಸಾಹಿತ್ಯವೂ ಅವರ ಹುಡುಕಾಟದ ಭಾಗವೇ ಆಗಿರುವುದನ್ನು ಕಾಣಬಹುದು.

ತೇಜಸ್ವಿಯವರ ಸಾಹಿತ್ಯ ರಾಶಿ ವಿಸ್ತಾರವಾಗಿದೆ. ಕಥೆ, ಕಾದಂಬರಿ, ಕಾವ್ಯ, ನಾಟಕ, ಪ್ರವಾಸ ಕಥನ, ಅನುವಾದ, ಪ್ರಾಣಿ–ಪಕ್ಷಿ ಕುರಿತ ನುಡಿ ಚಿತ್ರಗಳು, ವೈಜ್ಞಾನಿಕ ಬರಹಗಳು ಮುಂತಾಗಿ ವೈವಿಧ್ಯಮಯವಾಗಿ ಬರೆದರು. ಕಂಪ್ಯೂಟರ್‌ನಲ್ಲೂ ಹೆಚ್ಚಿನ ಆಸಕ್ತಿ ಹೊಂದಿದ್ದ ತೇಜಸ್ವಿ ತಮ್ಮ ನಡು ವಯಸ್ಸಿನಲ್ಲೂ ಕಂಪ್ಯೂಟರ್ ಕಲಿತು ಅದರಲ್ಲಿ ತಕ್ಕಮಟ್ಟಿನ ಪ್ರಾವೀಣ್ಯತೆ ಸಾಧಿಸಿದರು. ಕನ್ನಡ ಸಾಫ್ಟ್‌ವೇರ್ ಅಭಿವೃದ್ಧಿಯ ವಿಚಾರದಲ್ಲಿ ದನಿ ಎತ್ತಿದ ಏಕೈಕ ಲೇಖಕ ತೇಜಸ್ವಿ. ಕುಂಚ ಹಿಡಿದು ಗೀಜುವ ಕಲೆಗಾರಿಕೆಯೂ ಅವರಿಗಿತ್ತು.

ತೇಜಸ್ವಿ ಜನಿಸಿದ್ದು ೧೯೩೮ರಲ್ಲಿ. ಹುಟ್ಟಿದ್ದು ಶಿವಮೊಗ್ಗದಲ್ಲಾದರೂ ಬಹುತೇಕ ಬೆಳೆದಿದ್ದೆಲ್ಲ ಮೈಸೂರಿನಲ್ಲಿ. ಮೈಸೂರು ವಿಶ್ವ ವಿದ್ಯಾಲಯದಿಂದ ಸಾಹಿತ್ಯದಲ್ಲಿ ಎಂ.ಎ. ಪಡೆದರು. ಅವರ ತಂದೆ ಕುವೆಂಪು ಮೈಸೂರಿಗೆ ಬಂದು ಅಲ್ಲೇ ನೆಲೆಸಿ ಪ್ರಾಧ್ಯಾಪಕರಾಗಿ ವಿಶ್ವವಿದ್ಯಾಲಯದ ಕುಲಪತಿಗಳಾಗಿ ಹೆಚ್ಚೂ ಕಡಿಮೆ ತಮ್ಮೆಲ್ಲಾ ಬರವಣಿಗೆಯನ್ನು ಅಲ್ಲೇ ಮಾಡಿದರು. ಅಲ್ಲೇ ತಮ್ಮ ಜೀವನದ ಬಹುಭಾಗವನ್ನು ಕಳೆದರು. ಆದರೆ ತೇಜಸ್ವಿಯವರದು

ಇದಕ್ಕೆ ವಿರುದ್ಧವಾದ ಚಲನೆ. ಶಿವಮೊಗ್ಗದಲ್ಲಿ ಹುಟ್ಟಿ, ಮೈಸೂರಿನಲ್ಲಿ ಬೆಳೆದು ಅಲ್ಲೇ ವಿದ್ಯಾಭ್ಯಾಸ ಮುಗಿಸಿ ಅಲ್ಲೇ ಸಿಗಬಹುದಾಗಿದ್ದ ಪ್ರಾಧ್ಯಾಪಕ ಹುದ್ದೆ ನಂತರ ಸಿಗಬಹುದಾಗಿದ್ದ ಕುಲಪತಿ ಅವಕಾಶ ಎಲ್ಲವನ್ನೂ ತೊರೆದು ಮೂಡಿಗೆರೆಯೆಂಬ ಗ್ರಾಮೀಣ ಪರಿಸರದತ್ತ ಚಲಿಸಿದರು. ಅಲ್ಲಿ ಭೂಮಿ ಕೊಂಡು ಮೂಲ ಕೃಷಿಕರೇ ಆಗಿ ಕೃಷಿಯಲ್ಲಿ ಹಲವು ಪ್ರಯೋಗಗಳನ್ನು ನಡೆಸಿದರು. ಇದರೊಂದಿಗೆ ತಮ್ಮೆಲ್ಲಾ ಬರಹಗಳನ್ನು ಅಲ್ಲೇ ಮುಗಿಸಿದರು.

ತೇಜಸ್ವಿಯವರ ಪ್ರತಿಯೊಂದು ಬರಹದಲ್ಲೂ ಕುತೂಹಲವಿತ್ತು; ಬೆರಗಿನ ಲೋಕದ ಅನಾವರಣವಿತ್ತು. ಕಾಡು ಮೇಡುಗಳನ್ನು ಅಲೆದು ಪ್ರಕೃತಿಯ ನಿಗೂಢತೆ, ವೈಚಿತ್ರ್ಯಗಳನ್ನು ತಮ್ಮ ಕ್ಯಾಮೆರಾದಲ್ಲಿ ಹೇಗೋ ಹಾಗೆ ಸಾಹಿತ್ಯದಲ್ಲೂ ಸೆರೆ ಹಿಡಿದರು. ಈ ವಿಸ್ಮಯ ಹಾಗೂ ವೈಚಿತ್ರ್ಯಭರಿತ ಬರಹವೇ ವಿವಿಧ ವರ್ಗದ ವಿಭಿನ್ನ ಓದುಗರನ್ನು ಇವರತ್ತ ಸೆಳೆಯಿತು.

ನವೋದಯ, ನವ್ಯ ಹಾಗೂ ನವ್ಯೋತ್ತರ ಕಾಲಘಟ್ಟಗಳಲ್ಲಿ ಬರೆದ ತೇಜಸ್ವಿ ತಮ್ಮದೇ ವಿಶಿಷ್ಟ ಅಭಿವ್ಯಕ್ತಿ ವಿಧಾನವನ್ನು ಕಂಡುಕೊಂಡರು. ಲೋಹಿಯಾ ತತ್ವಚಿಂತನೆ, ಕುವೆಂಪು ಕಾವ್ಯಸೃಷ್ಟಿ, ಹಾಗೂ ಕಾರಂತರ ಜೀವನ ಪ್ರಯೋಗಶೀಲತೆ ಹಾಗೂ ಸಾಹಸಪ್ರಿಯತೆ ಇವರ ಬದುಕು ಮತ್ತು ಬರಹದ ಮೇಲೆ ಪ್ರಭಾವ ಬೀರಿದ ಅಂಶಗಳಾಗಿವೆ. 'ಲಿಂಗಬಂಧ'ದಿಂದ ತಮ್ಮ ಸಾಹಿತ್ಯ ಕೃಷಿ ಆರಂಭಿಸಿದ ತೇಜಸ್ವಿ ವಿಸ್ಮಯದ 'ಮಾಯಾಲೋಕ'ದವರೆಗೆ ಬರೆದರು.

ಮಲೆನಾಡಿನ ದಟ್ಟ ಕಾಡಿನ ನಡುವಿನ ಪುಟ್ಟ ಊರೊಂದರಲ್ಲಿ ಜನಿಸಿದ ತೇಜಸ್ವಿ ಸಹಜವಾಗಿಯೇ ಪ್ರಕೃತಿ ಬಗೆಗಿನ ಪ್ರೀತಿ ಬೆಳೆಸಿಕೊಂಡರು. ಅವರ ಪ್ರಕೃತಿ ಪ್ರೀತಿ ಮತ್ತು ಅದರಿಂದ ಹುಟ್ಟಿದ ಅಡ್ವೆಂಚರಸ್ ಆದಂತಹ ವ್ಯಕ್ತಿತ್ವವೇ ಅವರ ಒಟ್ಟು ಬರಹಗಳಲ್ಲಿ ಹರಡಿಕೊಂಡಿದೆ. ತೇಜಸ್ವಿ ವಿಜ್ಞಾನದ ಕುರಿತು ಅಪಾರವಾದ ಜ್ಞಾನ ಮತ್ತು ಒಲವು ಹೊಂದಿದ್ದರು. ಅವರ ವಿಜ್ಞಾನದ ಬಗೆಗಿನ ಪ್ರೀತಿ ಎಷ್ಟಿತ್ತೆಂದರೆ ಕನ್ನಡದಲ್ಲಿ ಯಾವ ಸಾಹಿತಿಯೂ ಬರೆಯದ ವಿಜ್ಞಾನದ ಕುರಿತು ಅತ್ಯಂತ ಸರಳವಾದ ಭಾಷೆಯಲ್ಲಿ ಹಲವು ಕೃತಿಗಳನ್ನು ರಚಿಸಿದರು. ವಿಜ್ಞಾನದಂಥ ನೀರಸ ವಿಷಯವನ್ನೂ ಸಾಹಿತ್ಯದ ಪರಿಧಿಗೆ ತಂದು ಅದಕ್ಕೆ ಓದುಗರ ವಲಯವನ್ನೇ ರೂಪಿಸಿದ ಏಕೈಕ ಲೇಖಕ ತೇಜಸ್ವಿ.

ತೇಜಸ್ವಿ ಸಾಹಿತ್ಯದಲ್ಲಿ ತೋರಿದಷ್ಟೇ ಆಸಕ್ತಿಯನ್ನು ಸಾಹಿತ್ಯೇತರ ವಿಚಾರದಲ್ಲೂ ತೋರಿದರು. ಕೃಷಿ, ಛಾಯಾಗ್ರಹಣ, ಕಂಪ್ಯೂಟರ್, ಸಾಹಸ ಕ್ರೀಡೆಗಳು, ಕಲೆ, ಸಂಗೀತ ಮುಂತಾದ ಹತ್ತು ಹಲವು ವಿಚಾರಗಳಲ್ಲಿ ಹೆಚ್ಚಿನ ಆಸಕ್ತಿ ತೋರಿಸಿದಷ್ಟೇ ಅಲ್ಲ, ಸಾಧಿಸಿದರು ಕೂಡ. ಕನ್ನಡದಲ್ಲಿ ಕಾರಂತರನ್ನು ಬಿಟ್ಟರೆ ಸಾಹಿತ್ಯೇತರ ವಿಚಾರಗಳಲ್ಲಿ ಇಷ್ಟು ಆಸಕ್ತಿ ಹೊಂದಿದ್ದ ಮತ್ತು ಆ ಆಸಕ್ತಿಗಳನ್ನು ಪೋಷಿಸಿದ ಅಪರೂಪದ ಲೇಖಕ ತೇಜಸ್ವಿ.

ಕನ್ನಡ ಸಾಹಿತ್ಯದ ಎಲ್ಲ ವರ್ಗೀಕರಣಗಳನ್ನೂ ಮೀರಿ ಏಕಗ್ರಾಹಕವಾದ ನಿಜಮುದಯವನ್ನು ನಮ್ಮ ದೃಷ್ಟಿಯಲ್ಲಿಟ್ಟುಕೊಂಡು ಯೋಚಿಸಿದರೆ 'ಮಾನವ ಕೇಂದ್ರಿತ 'ಮಾನವತಾವಾದ' ಹಾಗೂ ಜೀವಕೇಂದ್ರಿತ 'ಇಕಾಲಜಿ'ಗಳೆಂಬ ವಿರುದ್ಧ ಧೃವಗಳು ಕಂಡುಬರುತ್ತವೆ. ತೇಜಸ್ವಿಯವರ ಹಿರಿಮೆಯೆಂದರೆ ಮಾನವತಾವಾದವನ್ನು ಇಕಾಲಜಿಯ ಆತ್ಮವನ್ನಾಗಿ ಪರಿವರ್ತಿಸಿ ಎರಡು ವಿರುದ್ಧ

ಧ್ರುವಗಳನ್ನು ಒಂದಾಗಿ ಬೆಸೆದದ್ದು. ತೇಜಸ್ವಿ ಯಾವ ಚೌಕಟ್ಟಿಗೂ ಬದ್ಧರಾದವರಲ್ಲ. ಸಿದ್ಧ ಮಾದರಿಗಳನ್ನು ಮುರಿಯುವುದೇ ಅವರ ಕೆಲಸ. ಇದೇ ಕಾರ್ಯವನ್ನು ಅವರ ಸಾಹಿತ್ಯ ಕೃತಿಗಳೂ ಮಾಡುತ್ತಾ ಬಂದಿವೆ. ವಿಜ್ಞಾನವನ್ನು ಅಪಾರವಾಗಿ ಪ್ರೀತಿಸುತ್ತಿದ್ದ ತೇಜಸ್ವಿ ವಿಜ್ಞಾನ ಸಾಂಸ್ಥಿಕಗೊಂಡಾಗ ಉಂಟುಮಾಡಬಹುದಾದ ಅನಾಹುತಗಳ ಬಗ್ಗೆ ಎಚ್ಚರದಿಂದಿದ್ದರು. ಅವರು ವಿಜ್ಞಾನವನ್ನು ಒಂದು ಪಥವಾಗಿ ಸ್ವೀಕರಿಸಿದರೇ ಹೊರತು ಪಂಥವಾಗಿ ಅಲ್ಲ.

ನವ್ಯ ಕಾಲಘಟ್ಟದಲ್ಲಿ ತಮ್ಮ ಬರವಣಿಗೆಯನ್ನು ಆರಂಭಿಸಿದ ತೇಜಸ್ವಿ ನವ್ಯ ಪಂಥ ಉಚ್ಛ್ರಾಯ ಸ್ಥಿತಿಯಲ್ಲಿದ್ದ ಕಾಲದಲ್ಲಿ ನವ್ಯದ ಜೊತೆ ಗುರ್ತಿಸಿಕೊಂಡರೂ ನವ್ಯದ ವ್ಯಕ್ತಿನಿಷ್ಟ ಶುಷ್ಕ ಸಿದ್ಧಾಂತಗಳ ಮಿತಿಯನ್ನು ಮನಗಂಡು ಹೊಸ ಹಾದಿಯನ್ನು ತುಳಿದರು. ಆನಂತರ ಅವರು ತುಳಿದದ್ದೇ ಹಾದಿ. ಯಾವ ಪಂಥಗಳಿಗೂ ಬದ್ಧರಾಗದೆ ನವೋದಯ, ನವ್ಯ, ಪ್ರಗತಿಶೀಲ ಮತ್ತು ದಲಿತ-ಬಂಡಾಯ ಎಂಬ ವರ್ಗೀಕರಣಗಳನ್ನೇ ನಿರಾಕರಿಸಿದರು. "ಸಾಹಿತ್ಯ-ಸಾಹಿತ್ಯೇತರ, ಸೃಜನ-ಸೃಜನೇತರ, ಸಾಹಿತ್ಯ-ವಿಮರ್ಶೆ, ಕಥೆ-ಪ್ರಬಂಧ, ಕಾವ್ಯ-ಶಾಸ್ತ್ರ, ಎಂಬೆಲ್ಲ ವಿಭಜನೆ ವರ್ಗೀಕರಣಗಳನ್ನು ದಾಟಿ ತೇಜಸ್ವಿ ಮುನ್ನಡೆದಿದ್ದಾರೆ. ಹಾಗೆಯೇ ಶಿಕ್ಷಣ-ಮನರಂಜನೆ, ಗಂಭೀರ-ಜನಪ್ರಿಯ ಎಂಬಂಥ ದ್ವಿದಳ ವಿಭಜನೆಯನ್ನು ಮೀರಿದ ಹದವೊಂದನ್ನು ಸಾಧಿಸಿಬಿಟ್ಟಿದ್ದಾರೆ"[1] ಎನ್ನುವ ಟಿ.ಪಿ.ಅಶೋಕ ಅವರ ಮಾತುಗಳು ತೇಜಸ್ವಿಯವರ ಸೀಮಾತೀತ ವ್ಯಕ್ತಿತ್ವವನ್ನು ಮತ್ತಷ್ಟು ಸ್ಫುಟಗೊಳಿಸುತ್ತವೆ.

ತೇಜಸ್ವಿಯವರ ಕಥನಗಳು ನಿಜವಾದ ಅರ್ಥದಲ್ಲಿ ಪರಿಸರದ ಕಥನಗಳಾಗಿವೆ. ಇದು ಶುಷ್ಕವಾದ ಪರಿಸರಶಾಸ್ತ್ರವೆಂಬ ಅಂಕಿ ಅಂಶಗಳಿಂದ ಹುಟ್ಟಿದ್ದಲ್ಲ. ಜೀವನಾನುಭವದ ಸಹಯೋಗದಿಂದ ಮೂಡಿದ ಜೀವಂತ ಸಾಹಿತ್ಯ ತೇಜಸ್ವಿಯವರದು. ಲವಲವಿಕೆಯಿಂದ ಕೂಡಿದ ತೇಜಸ್ವಿ ಬರಹ ಅವರ ಬದುಕಿನಷ್ಟೇ ಸಮೃದ್ಧ. ಮೈಸೂರಿನಿಂದ ಮೂಡಿಗೆರೆಯತ್ತ ನಡೆದ ತೇಜಸ್ವಿ ಅಕಾಡೆಮಿಕ್ ಜಗತ್ತಿನಿಂದ ದೂರ ಸರಿದು ತಮ್ಮ ಸುತ್ತಲಿನ ಪರಿಸರದಿಂದಲೇ ಸೃಜನಶೀಲ ಪ್ರೇರಣೆಗಳನ್ನು ಪಡೆದರು.

ತಮ್ಮ ಬಹುಮುಖೀ ಓದಿನಿಂದ ಪಡೆದ ಆಳವಾದ ಜ್ಞಾನವನ್ನೂ ಬದುಕಿನ ಹುಡುಕಾಟದಿಂದ ಪಡೆದ ಅನುಭವವನ್ನೂ ಸಂಯೋಜಿಸಿ ತಮ್ಮ ಬರವಣಿಗೆಗೆ ಹೊಸದೊಂದು ಲಯವನ್ನು ರೂಪಿಸಿಕೊಂಡರು. ತೇಜಸ್ವಿಯವರದು ಜೀವಕೇಂದ್ರಿತ ನೆಲೆಯಾದ್ದರಿಂದಲೇ ಇವರಿಗೆ ಯಾವುದೂ ಅಮುಖ್ಯವಲ್ಲ; ಯಾರೂ ಅಮುಖ್ಯರಲ್ಲ. ಇದೇ ನೆಲೆ ಅವರ ಕೊನೆ ಬರಹ ಮಾಯಾಲೋಕದಲ್ಲೂ ಸಾದರಗೊಂಡಿದೆ. ಇಲ್ಲಿ ಯಾವುದೇ ಕೇಂದ್ರ ವಸ್ತುವಿಲ್ಲ; ಕೇಂದ್ರ ಪಾತ್ರವಿಲ್ಲ; ಏಕ ಕೇಂದ್ರಿತ ಚಿಂತನೆಯಿಲ್ಲ. ಎಲ್ಲ ಪಾತ್ರಗಳೂ, ಎಲ್ಲ ಘಟನೆಗಳೂ ಅವರದೇ ಮಹತ್ವವನ್ನು ಪಡೆಯುತ್ತವೆ.

---

ಅಡಿ ಟಿಪ್ಪಣಿ

1. 'ತೇಜಸ್ವಿ ಕಥನ'- ಲೇ. ಟಿ.ಪಿ.ಅಶೋಕ, ಪುಟ-೪೮, ಅಕ್ಷರ ಪ್ರಕಾಶನ, ಮೊದಲ ಮುದ್ರಣ-೨೦೦೪

*****

# ಅಧ್ಯಾಯ: ೧
## ತೇಜಸ್ವಿ ಸಾಹಿತ್ಯ ಪರಿಚಯ

ತೇಜಸ್ವಿ ಕೇವಲ ಸಾಹಿತ್ಯವನ್ನಷ್ಟೇ ಬರೆಯಲಿಲ್ಲ. ಸಾಹಿತ್ಯೇತರ ವಿಚಾರಗಳನ್ನು ಕುರಿತು ಅಪಾರವಾಗಿ ಬರೆದರು. ಕಥನ ಕ್ರಮದಲ್ಲಿ ಬರೆಯುವುದರ ಮೂಲಕ ಸಾಹಿತ್ಯೇತರ ವಿಚಾರಗಳನ್ನೂ ಕೂಡ ಸಾಹಿತ್ಯದ ಪರಿಧಿಗೆ ತಂದದ್ದು ತೇಜಸ್ವಿ ಸಾಹಿತ್ಯಕವಾಗಿ ನಡೆಸಿದ ಅನನ್ಯ ಪ್ರಯತ್ನ ಎನ್ನಬಹುದು. ಜಗತ್ತಿನ ಜ್ಞಾನವನ್ನೆಲ್ಲ ಕನ್ನಡದಲ್ಲಿ ಹಿಡಿದಿಡಬೇಕೆಂಬ ತೀವ್ರ ಹಂಬಲ ತೇಜಸ್ವಿಗಿತ್ತು. ಅವರ ವಿಭಿನ್ನ ಬರಹಗಳು ಈ ಹಂಬಲವನ್ನು ಸ್ಫುಟಗೊಳಿಸುತ್ತವೆ. ತೇಜಸ್ವಿ ವಿಜ್ಞಾನ, ಸಾಹಸಯಾತ್ರೆ ಹಾಗೂ ಪರಿಸರದ ಕುರಿತು ಮಾಹಿತಿ(ಇಲ್ಲಿ ಮಾಹಿತಿ ಎಂಬುದನ್ನು ಜ್ಞಾನ ಎಂದು ಅರ್ಥೈಸಿ ಬಳಸಲಾಗಿದೆ) ಪ್ರಧಾನವಾಗಿ ಅಪಾರ ಪ್ರಮಾಣದ ಕೃತಿರಚನೆ ಮಾಡಿದರು. ಆದರೆ ಇದು ಕೇವಲ ಮಾಹಿತಿಗಷ್ಟೇ ಸೀಮಿತವಲ್ಲ, ಬದಲಿಗೆ ಮಾಹಿತಿಯಾಚೆಗೆ ಜನರಲ್ಲಿ ಅರಿವನ್ನು ಮೂಡಿಸುವ, ಸಾಹಿತ್ಯದ ಉದ್ದೇಶಗಳಲ್ಲಿ ಒಂದಾದ ಓದಿನ ಮನರಂಜನೆ ಒದಗಿಸುವ, ಪರಿಸರದ ಬಗೆಗೆ ಆಸಕ್ತಿ, ಕುತೂಹಲ ಮೂಡಿಸುವ ಜೊತೆಗೆ ಪರಿಸರ ನಾಶದ ಅಪಾಯವನ್ನು ಎಚ್ಚರಿಸುವಂಥ ಮಹತ್ತರ ಉದ್ದೇಶಗಳನ್ನು ಈ ಕೃತಿಗಳು ಸಾಧಿಸಬಲ್ಲವಾಗಿವೆ.

ಇದರ ಜೊತೆಗೆ ನಮ್ಮ ಕನ್ನಡ ಸಾಹಿತ್ಯ ತನ್ನ ವಸ್ತುವಿನ ಆಯ್ಕೆಯಲ್ಲಿ ಮಾಡಿಕೊಳ್ಳಬೇಕಾದ ಮಾರ್ಪಾಡನ್ನೂ ಸೂಚಿಸುತ್ತಿವೆ. ಅಂದರೆ ಕೇವಲ ಸಮಾಜ, ಮನುಷ್ಯ, ಬದುಕು, ಪ್ರೀತಿ–ಪ್ರೇಮ ಮುಂತಾದ ಸಂಬಂಧಗಳು–ಹೀಗೆ ಮನುಷ್ಯ ಪ್ರಪಂಚದಲ್ಲೇ ಗಿರಕಿ ಹೊಡೆಯುತ್ತಿರುವ ನಮ್ಮ ಕನ್ನಡ ಸಾಹಿತ್ಯ  ವಿಜ್ಞಾನ, ಅದರ ಅಪಾಯ, ಅದರ ಮಿತಿ, ಹಾಗೆ ಅದರ ಮಹತ್ವವನ್ನು ಕುರಿತಾದ ವಸ್ತುಗಳನ್ನು ಹಾಗೂ ಪರಿಸರ, ಪ್ರಾಣಿ ಜಗತ್ತು, ಪಕ್ಷಿ ಜಗತ್ತು, ಪರಿಸರದ ವಿಸ್ಮಯಗಳು, ಪರಿಸರದ ವಿನಾಶ ಜೊತೆಗೆ ಜೀವನಕ್ಕೆ ಸ್ಫೂರ್ತಿ ನೀಡಬಲ್ಲ, ಬದುಕಿಗೆ ಚೈತನ್ಯ ತುಂಬಬಲ್ಲ ಸಾಹಸಯಾತ್ರೆಗಳನ್ನು ಕುರಿತಾದ ವಸ್ತುಗಳನ್ನು ಸಾಹಿತ್ಯದ ಪರಿಧಿಯಲ್ಲಿ ಯೋಚಿಸಬೇಕಾದ ಅಗತ್ಯವನ್ನು ಇವು ಒತ್ತಿ ಹೇಳುತ್ತವೆ. ಇಂಗ್ಲೀಷ್ ಸಾಹಿತ್ಯ ವಿಜ್ಞಾನವನ್ನು ಅಪಾರವಾಗಿ ಬಳಸಿಕೊಂಡಿದೆ. ಸಾಹಸ ಪ್ರಧಾನ ಕಾದಂಬರಿಗಳು ಇಂಗ್ಲೀಷ್ ಸಾಹಿತ್ಯದ ಭಾಗವೇ ಆಗಿವೆ. ಆದರೆ ಅದೇಕೋ ಕನ್ನಡ ಸಾಹಿತ್ಯ ಮಾತ್ರ ಸಾಮಾಜಿಕತೆಯನ್ನು ಬಿಟ್ಟು ಹೊರಬರುತ್ತಲೇ ಇಲ್ಲ.

ಕನ್ನಡ ಸಾಹಿತ್ಯ ವಸ್ತುವಿನ ಬದಲಾವಣೆಗೆ ಒಳಗಾಗಬೇಕಾದ ವಿಷಯ ಹಲವು ನೆಲೆಯಲ್ಲಿ ಮಹತ್ವ ಪಡೆಯುತ್ತದೆ. ಕನ್ನಡದಲ್ಲಿ ಪ್ರಧಾನವಾಗಿ ಸಾಮಾಜಿಕ, ವಿರಳವಾಗಿರುವ ಐತಿಹಾಸಿಕ ಕಾದಂಬರಿಗಳನ್ನೇ ಓದಿ ಕಾದಂಬರಿ ಎಂದರೆ ಇಷ್ಟೇ ಎಂದು ಭಾವಿಸಿರುವ ಕನ್ನಡ ಓದುಗರಿಗೆ

ಹೊಸದೊಂದು ಬಗೆಯ ಸಾಹಿತ್ಯವನ್ನು ಒದಗಿಸಿ ಸಾಹಿತ್ಯದ ಎಲ್ಲೆಯನ್ನು ವಿಸ್ತರಿಬೇಕಿದೆ. ಪರಿಸರದ ಕುರಿತಾದ ವಸ್ತುವುಳ್ಳ ಕಥೆ, ಕಾದಂಬರಿಗಳನ್ನು ಬರೆಯುವ ಮೂಲಕ ಪರಿಸರದ ಬಗೆಗೆ ಓದುಗರಲ್ಲಿ ಆಸಕ್ತಿಯನ್ನು ಮೂಡಿಸುವುದರ ಜೊತೆಗೆ ಅದರ ಮಹತ್ವವನ್ನು ಅರ್ಥಮಾಡಿಸಬೇಕಿದೆ. ಮಹೋನ್ನತ ಸಾಹಸ ಕಾದಂಬರಿಗಳನ್ನು ಬರೆಯುವ ಮೂಲಕ ಕನ್ನಡಿಗರಲ್ಲಿ ಸಾಹಸ ಮನೋಭಾವವನ್ನು ಮೈಗೂಡಿಸಿ ಸಾಹಸ ಕಾರ್ಯಗಳಿಗೆ ಮುನ್ನುಗ್ಗುವಂಥ ಕಾರ್ಯಕ್ಕೆ ಸಾಹಿತ್ಯ ನಾಂದಿ ಹಾಡಬೇಕಿದೆ. 'ಸಾಹಿತ್ಯದಿಂದ ಎಲ್ಲವೂ ಸಾಧ್ಯ' ಎಂದು ನಂಬುವವರಿಗೆ ಇದರ ಅಗತ್ಯ ಮತ್ತು ಸಾಧ್ಯತೆ ಮನವರಿಕೆಯಾದೀತು. ಸೈಂಟಿಫಿಕ್ ಫ್ಯಾಂಟಸಿ ಇಂಗ್ಲೀಷ್ ಸಾಹಿತ್ಯದ ಪ್ರಧಾನ ವಸ್ತು. ಇಂಗ್ಲೀಷರಿಗೆ ಇರುವ ಸಾಹಸ ಪ್ರವೃತ್ತಿಯನ್ನು ನೋಡಿದರೆ ಇದು ಅವರ ಸಾಹಿತ್ಯವೇ ರೂಪಿಸಿದ ಸಾಮಾಜಿಕ ಮೌಲ್ಯ ಎಂದು ಯೋಚಿಸುವಂತೆ ಮಾಡುತ್ತದೆ. ವಿಜ್ಞಾನದ ಬಗೆಗೆ ಆಸಕ್ತಿಯೇ ಇಲ್ಲದ ಕನ್ನಡ ಲೇಖಕರು ವಿಜ್ಞಾನವನ್ನು ಫ್ಯಾಂಟಸಿಯಾಗಿ ಬರೆಯುವುದಾದರೂ ಹೇಗೆ! ವಿಜ್ಞಾನ ಎನ್ನುವುದು ಸಾಹಿತಿಗಳಿಗಲ್ಲ ಎನ್ನುವ ಅಸ್ಪೃಶ್ಯತಾ ಭಾವವನ್ನು ನಮ್ಮ ಸಾಹಿತಿಗಳು ಮೊದಲು ತೊರೆಯಬೇಕಿದೆ. ಅಗ ಮಾತ್ರ ವಿಜ್ಞಾನವನ್ನು ಸಾಹಿತ್ಯದ ವಸ್ತುವಾಗಿ ನೋಡಲು ಸಾಧ್ಯ. ಕನ್ನಡದಲ್ಲಿ ಕಾರಂತರಿಂದ ಆರಂಭಗೊಂಡ ಕನ್ನಡ ಸಾಹಿತ್ಯದ 'ವಿಭಿನ್ನ ವಸ್ತು ಅಭಿಯಾನ'ದ ಧಾರೆ ತೇಜಸ್ವಿಯವರಲ್ಲಿ ತೊರೆಯಾಗಿ ಹರಿಯಿತು ಆದರೆ ಇದನ್ನು ನದಿಯಾಗಿಸಬೇಕಾದ ಅಗತ್ಯವನ್ನು ತೇಜಸ್ವಿ ಬರಹ ಕೂಗಿ ಹೇಳುತ್ತಿದೆ.

ತೇಜಸ್ವಿ ಹಟಕ್ಕೆ ಬಿದ್ದವರಂತೆ, ಹುಚ್ಚು ಹಿಡಿದವರಂತೆ ಬರೆದರು. ಆದ್ದರಿಂದಲೇ ಅಷ್ಟು ಪ್ರಮಾಣದ ಸಾಹಿತ್ಯ ರಾಶಿ ಸೃಷ್ಟಿಯಾಗಲು ಸಾಧ್ಯವಾಯಿತು. ಕಥೆ, ಕಾದಂಬರಿ, ಕಾವ್ಯ, ನಾಟಕ, ಪ್ರವಾಸ ಕಥನ, ಆತ್ಮಕಥನ, ಅನುವಾದ, ಮುಂತಾದ ಪ್ರಕಾರಗಳಲ್ಲಿ ನೂರಾರು ವಸ್ತುಗಳನ್ನು ಅಡಗಿಸಿದರು. ಪ್ರಾಣಿ-ಪಕ್ಷಿ, ವಿಜ್ಞಾನ, ಕೆಲವು ಮಹಾನ್ ವ್ಯಕ್ತಿಗಳು ತಮ್ಮ ಮಹತ್ ಸಾಧನೆಗಾಗಿ ನಡೆಸಿದ ಸಾಹಸ ಯಾತ್ರೆಗಳು, ವಿಶ್ವ ಮಹಾಸಮರಗಳು, ನಾಗರೀಕತೆಗಳ ಹುಟ್ಟು-ಬೆಳವಣಿಗೆ, ಜಗತ್ತಿನ ವಿಸ್ಮಯಗಳು, ಅಗ್ನಿ ಪರ್ವತ, ಚಂಡಮಾರುತ, ಭೂಕಂಪ, ಮುಂತಾದ ಪ್ರಕೃತಿ ವೈಚಿತ್ರ್ಯಗಳು, ಆಕಾಶವನ್ನೂ ತನ್ನ ನಿಯಂತ್ರಣಕ್ಕೊಳಪಡಿಸಿಕೊಳ್ಳಲು ಮನುಷ್ಯ ಆರಂಭದಲ್ಲಿ ನಡೆಸಿದ ಭಾಹ್ಯಾಕಾಶ ಯಾನ, ಒಂದು ಕಾಲದಲ್ಲಿ ಜಗತ್ತನ್ನು ಕಾಡಿದ ಮಾರಣಾಂತಿಕ ಖಾಯಿಲೆಗಳು-ಹೀಗೆ ಇನ್ನೂ ಹಲವು ವಿಚಾರಗಳು ತೇಜಸ್ವಿ ಸಾಹಿತ್ಯದಲ್ಲಿ ಸ್ಥಾನ ಪಡೆದವು. ಅವರ ಸಾಹಿತ್ಯದ ಈ ವಸ್ತು ವೈವಿಧ್ಯತೆಯನ್ನು ನೋಡಿದರೆ ತೇಜಸ್ವಿಯವರ ವೈವಿಧ್ಯಮಯ ಓದು ಅಬ್ಬಾ! ಎನಿಸುತ್ತದೆ, ಅದೆಲ್ಲವನ್ನೂ ಕನ್ನಡದಲ್ಲಿ ದಕ್ಕಿಸಿಕೊಡಬೇಕೆಂಬ ಹಂಬಲ ನಿಜಕ್ಕೂ ಅದ್ಭುತ ಎಂದರೂ ತಪ್ಪಿಲ್ಲ.

ಮೇಲಿನ ಎಲ್ಲ ಅಂಶಗಳನ್ನು ಗಮನಿಸಿದರೆ ತೇಜಸ್ವಿಯನ್ನು ಕೇವಲ ಸಾಹಿತ್ಯಕವಾಗಿ ನೋಡಿದರೆ ಅಥವಾ ಅವರ ಕೆಲವೇ ಕೃತಿಗಳನ್ನು ಸಾಹಿತ್ಯ ಕೃತಿಗಳು ಎಂದು ಪರಿಗಣಿಸಿದರೆ ಅದು ತೇಜಸ್ವಿ ವ್ಯಕ್ತಿತ್ವದ ಒಂದು ಭಾಗವನ್ನು ಮಾತ್ರ ಪರಿಗಣಿಸಿದಂತೆಯೇ ಹೊರತು ಪೂರ್ಣವಾಗಿ ಅಲ್ಲ. ಹೀಗಾಗಿ ತೇಜಸ್ವಿಯವರ ವೈವಿಧ್ಯಮಯ ಮತ್ತು ಮಹಾನ್ ವ್ಯಕ್ತಿತ್ವವನ್ನು ಪೂರ್ಣವಾಗಿ ಗ್ರಹಿಸಬೇಕಾದರೆ ಅವರು ಬರೆದಿರುವ ಎಲ್ಲ ಕೃತಿಗಳನ್ನೂ ಸಾಹಿತ್ಯಕವಾಗಿ ಸಮಗ್ರವಾಗಿ ನೋಡುವ ಅಗತ್ಯವಿದೆ. ನನ್ನ ಸೀಮಿತ ಅಧ್ಯಯನದಲ್ಲಿ ತೇಜಸ್ವಿಯವರ ಮಾಯಾಲೋಕ ಒಂದನ್ನೇ ಪರಿಗಣಿಸಿರುವಲ್ಲಿಯೂ ಕೂಡ ಅವರ ಒಟ್ಟು ಬರಹವನ್ನು ಪರಿಚಯಿಸುವ ಕಾರ್ಯಕ್ಕೆ ಮುಂದಾಗಿರುವುದು ಇದೇ ಕಾರಣಕ್ಕೆ. ಈ

ಹಿನ್ನೆಲೆಯಲ್ಲಿ ತೇಜಸ್ವಿಯವರ ಕೊನೆಯ ಮಾಯಾಲೋಕಕ್ಕೆ ಪ್ರವೇಶ ಪಡೆಯುವುದಕ್ಕೆ ಮೊದಲು ಅವರ ಹಿಂದಿನ ಬಹುದೊಡ್ಡ 'ಮಾಯಾಲೋಕ'ವನ್ನು ಪರಿಚಯ ಮಾಡಿಕೊಳ್ಳುವುದು ಅತ್ಯಂತ ಅಗತ್ಯವಾದದ್ದು. ಇಲ್ಲಿ ತೇಜಸ್ವಿಯವರ ಯಾವುದೇ ಕೃತಿಯನ್ನು ವಿಮರ್ಶಿಸ ಹೋಗದೆ ಕೇವಲ ನನ್ನ ಮಿತಿಯಲ್ಲಿ ಪರಿಚಯಿಸುವ ಪ್ರಯತ್ನ ಮಾಡಿದ್ದೇನೆ. ಆದರೂ ಇದು ಓದುಗರಿಗೆ ತೇಜಸ್ವಿ ಸಾಹಿತ್ಯದ ಬಗೆಗೆ ಮಾಹಿತಿಗಿಂತ ಹೆಚ್ಚಿನದನ್ನು ತಲುಪಿಸಬಲ್ಲದು ಎಂಬುದು ನನ್ನ ನಂಬಿಕೆ.

**ಕಾದಂಬರಿಗಳು :**

ತೇಜಸ್ವಿ ವಿಪುಲವಾಗಿ ಹಾಗೂ ವಿಭಿನ್ನವಾಗಿ ಸಾಹಿತ್ಯವನ್ನು ಸೃಷ್ಟಿಸಿದ್ದಾರಾದರೂ ಸಾಹಿತ್ಯ ವಲಯದಲ್ಲಿ ಕಾದಂಬರಿಕಾರರಾಗಿಯೇ ಅವರು ಹೆಚ್ಚು ಪರಿಚಿತರು. ಬೇರೆಲ್ಲ ಪ್ರಕಾರಗಳಿಗಳಿಗಿಂತ ಕಥನ ಪ್ರಕಾರಗಳಾದ ಕಥೆ ಮತ್ತು ಕಾದಂಬರಿಗಳಲ್ಲಿ ತೇಜಸ್ವಿ ಪ್ರಾವೀಣ್ಯತೆ ಸಾಧಿಸಿದರು. ಆದ್ದರಿಂದಲೇ ಓದುಗರನ್ನು ಹಿಡಿದಿಡಬಲ್ಲ ಸಾಮರ್ಥ್ಯ ಅವರ ಕಥನಗಳಿಗಿದೆ. ತೇಜಸ್ವಿ ಬರೆದದ್ದು ನಾಲ್ಕೇ ಕಾದಂಬರಿಗಳಾದರೂ ಇವರು ಕನ್ನಡ ಸಾಹಿತ್ಯದ ಮಹತ್ವದ ಕಾದಂಬರಿಕಾರರಲ್ಲಿ ಒಬ್ಬರು ಎಂಬುವುದರಲ್ಲಿ ಯಾವುದೇ ಸಂಶಯವಿಲ್ಲ. ಸಾಹಿತ್ಯ ವಲಯದಲ್ಲಿ ತೇಜಸ್ವಿ ಕಾದಂಬರಿಗಳನ್ನು ಓದದವರು ವಿರಳ. ಸಾಹಿತ್ಯೇತರ ವಲಯದಲಕ್ಕೂ ತೇಜಸ್ವಿ ಕಾದಂಬರಿಗಳೆಂದರೆ ಪ್ರಿಯ ಎಂದರೆ ಅದು ತೇಜಸ್ವಿ ಸಾಹಿತ್ಯದ ಆಕರ್ಷಣೆಯಲ್ಲದೆ ಮತ್ತೇನು ಅಲ್ಲ. ಪ್ರತಿಯೊಂದು ಕಾದಂಬರಿಗಳೂ ತನ್ನದೇ ಆದ ವಿಭಿನ್ನ ಕಥಾವಸ್ತುಗಳ ಮೂಲಕ ಮಹತ್ವದ ಚರ್ಚೆಗೆ ಇಂಬು ನೀಡುತ್ತವೆ. ವಿಮರ್ಶಕರ ದೃಷ್ಟಿಯಲ್ಲೂ ಹಾಗೂ ಓದುಗರ ದೃಷ್ಟಿಯಲ್ಲೂ ಇವು ಕನ್ನಡ ಸಾಹಿತ್ಯದ ಜನಪ್ರಿಯ ಕಾದಂಬರಿಗಳು. ಒಟ್ಟರ್ಥದಲ್ಲಿ ಕುವೆಂಪು ಅವರಂತೆ ತೇಜಸ್ವಿಯವರೂ ಕೂಡ ಕನ್ನಡದ ಶ್ರೇಷ್ಟ ಕಾದಂಬರಿಕಾರರು ಎನ್ನಲು ಅಡ್ಡಿಯಿಲ್ಲ.

**ಕರ್ವಾಲೋ(೧೯೮೦):** ಕರ್ವಾಲೋ ಕಾದಂಬರಿ ತೇಜಸ್ವಿಯವರ ಬಹು ಜನಪ್ರಿಯ ಕಾದಂಬರಿಗಳಲ್ಲಿ ಒಂದು. ೧೯೮೦ರಲ್ಲಿ ಮೊದಲ ಮುದ್ರಣ ಕಂಡ ಕರ್ವಾಲೋ ಇಪ್ಪತ್ತೆರಡು ವರ್ಷಗಳಲ್ಲಿ ಹದಿಮೂರು ಮುದ್ರಣಗಳನ್ನು ಕಂಡಿದೆ. ಇಂಗ್ಲೀಷ್, ಜಪಾನಿ, ಮಲಯಾಳಂ ಭಾಷೆಗಳಿಗೆ ಅನುವಾದಗೊಂಡಿದೆ. ೧೯೮೦ರ ಅತ್ಯುತ್ತಮ ಸೃಜನಶೀಲ ಕೃತಿ ಎಂದು ಕರ್ನಾಟಕ ಸಾಹಿತ್ಯ ಅಕಾಡೆಮಿ ವಿಶೇಷ ಬಹುಮಾನ ನೀಡಿ ಪುರಸ್ಕರಿಸಿದೆ. ಅನೇಕ ತರಗತಿಗಳಿಗೆ ಈ ಕಾದಂಬರಿ ಪಠ್ಯವಾಗಿದೆ.

ಜೀವ ವಿಕಾಸದ ಅವಸ್ಥಾಂತರಗಳನ್ನು ಶೋಧಿಸುತ್ತ ವಿವಿಧ ಜೀವ ಸಂಕುಲಗಳ ವಿನಾಶ ಮತ್ತು ಅವುಗಳನ್ನು ಹಿಡಿಯಲೆತ್ನಿಸುವ ಮನುಷ್ಯನ ವಿಫಲತೆಯನ್ನು ಹೇಳುವ ಕಾದಂಬರಿಯಿದು. ಮನುಷ್ಯ ಮತ್ತು ಪ್ರಕೃತಿಯ ನಡುವಿನ ಗಾಢ ಸಂಬಂಧವನ್ನು ಸಾರುವ ಈ ಕಾದಂಬರಿ ಸ್ಥಳೀಯ ಜ್ಞಾನಕ್ಕೆ ಹೆಚ್ಚು ಒತ್ತು ನೀಡಬೇಕಾದ ಅಗತ್ಯವನ್ನು ಒತ್ತಿ ಹೇಳುತ್ತದೆ. ಎಲ್ಲರ ಅವಜ್ಞೆಗೆ ಒಳಗಾಗಿದ್ದ ಹಾಗೂ ತನ್ನ ವಿಶಿಷ್ಟ ಹವ್ಯಾಸದಿಂದಲೇ ಎಲ್ಲರಿಂದ ನಗೆಪಾಟಲಿಗೀಡಾಗಿದ್ದ ಸ್ಥಳೀಯ ಪ್ರತಿಭೆ ಮಂದಣ್ಣನನ್ನು ಒಬ್ಬ ದೊಡ್ಡ ವಿಜ್ಞಾನಿಯ ಸರಿಸಮಾನವಾಗಿ ಚಿತ್ರಿಸುವ ಮೂಲಕ ಸ್ಥಳೀಯ ದೇಸಿಜ್ಞಾನ ಅಕಾಡೆಮಿಕ್ ಜ್ಞಾನಕ್ಕಿಂತ ಅಮೂಲ್ಯ ಎನ್ನುವುದನ್ನು ಕಾದಂಬರಿ ಧ್ವನಿಸತ್ತದೆ. ಆ ಮೂಲಕ ಕಾದಂಬರಿ ಪ್ರಕಾರದ ಸಾಧ್ಯತೆಗಳನ್ನೇ ವಿಸ್ತರಿಸಿದ ಕೃತಿ ಕರ್ವಾಲೋ.

**ಚಿದಂಬರ ರಹಸ್ಯ(೧೯೮೫):** ಇದು ತೇಜಸ್ವಿಯವರ ಮತ್ತೊಂದು ಜನಪ್ರಿಯ ಕಾದಂಬರಿ. ಅವರಿಗೆ ರಾಜ್ಯ ಮತ್ತು ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿಗಳನ್ನು (೧೯೮೭, ೧೯೮೮) ತಂದುಕೊಟ್ಟ ಕಾದಂಬರಿ. ಜೊತೆಗೆ ೧೯೮೯ರ ಭಾರತೀಯ ಭಾಷಾ ಪ್ರಾದೇಶಿಕ ಪ್ರಶಸ್ತಿಯನ್ನೂ ಪಡೆದಿದೆ. ಕನ್ನಡದಲ್ಲಿ ಆರು ಮುದ್ರಣಗಳನ್ನು ಕಂಡಿದ್ದು, ಮರಾಠಿ ಮತ್ತು ಪಂಜಾಬಿ ಭಾಷೆಗಳಿಗೂ ಅನುವಾದಗೊಂಡಿದೆ. ಕೋಮುಗಲಭೆಗಳಿಂದ ಇಡೀ ಕೆಸರೂರು ಬೆಂಕಿಗಾಹುತಿಯಾಗಿ ಜಾತ್ಯಾತೀತ ಮನೋಭಾವದವರಾದ ರಫಿ–ಜಯಂತಿ ಜೋಡಿಗಳು ಮಾತ್ರ ಉಳಿದುಕೊಳ್ಳುವುದರೊಂದಿಗೆ ಅಂತ್ಯವಾಗುವ ಈ ಕಾದಂಬರಿ ರೋಗಗ್ರಸ್ಥ ಸಮಾಜಕ್ಕೆ ಪರಿಹಾರವೊಂದನ್ನು ಸೂಚಿಸುವಂತಿದೆ. ರಫಿ–ಜಯಂತಿ ಎಂಬ ಭಾರತದ ಎರಡು ವಿರುದ್ಧ ಧರ್ಮಗಳನ್ನು ಮುಖಾಮುಖಿಯಾಗಿಸಿ ಕೊನೆಗೆ ಅದರ ನಾಶವಾಗುವುದರೊಂದಿಗೆ ಜಾತಿ ಧರ್ಮವನ್ನು ಮೀರಿದ ಹೊಸ ಸಮಾಜದ ನಿರ್ಮಾಣದ ಕಲ್ಪನೆಯೊಂದನ್ನು ನಮ್ಮ ಮುಂದಿಡುತ್ತದೆ.

**ಜುಗಾರಿ ಕ್ರಾಸ್(೧೯೯೪):** ಇದು ಪ್ರಕಟವಾದ ಮೊದಲ ವರ್ಷವೇ ಮರು ಮುದ್ರಣಕ್ಕೆ ಬೇಡಿಕೆ ತಂದ ಕಾದಂಬರಿ. ಹಿಂದಿನ ಕಾದಂಬರಿಗಳು ತೇಜಸ್ವಿಗೆ ತಂದುಕೊಟ್ಟ ಜನಪ್ರಿಯತೆಯನ್ನು ಜುಗಾರಿ ಕ್ರಾಸ್ ಮತ್ತಷ್ಟು ಹೆಚ್ಚಿಸಿತು. ಇನ್ನೂರೈವತ್ತು ಪುಟಗಳಲ್ಲಿನ ಇಲ್ಲಿನ ಕಥಾನಕ ಕೇವಲ ಇಪ್ಪತ್ನಾಲ್ಕು ಗಂಟೆಗಳಲ್ಲಿ ನಡೆಯುವ ಹಂದರದ್ದಾಗಿದೆ. ಜುಗಾರಿ ಕ್ರಾಸ್ ಎಂಬ ಪುಟ್ಟ ಕೂಡುದಾಣವೊಂದನ್ನು ಚಿತ್ರಿಸುವ ಮೂಲಕ ಇಂದಿನ ಇಡೀ ಪ್ರಪಂಚವೇ ಒಂದು ಜುಗಾರಿ ಕ್ರಾಸ್ ಆಗಿರುವುದನ್ನು ಮನಗಾಣಿಸುತ್ತದೆ.

ಹಣದ ಆಗರವಾದ ಇಂದಿನ ಸಾಮಾಜಿಕ ಸಂದರ್ಭ ಹೇಗೆ ಕಾಳದಂಧೆಯ ಕೇಂದ್ರವಾಗಿದೆ. ದೇಶದ ಅತ್ಯುನ್ನತ ರಾಜಕೀಯವನ್ನು ನಿಯಂತ್ರಿಸುವುವಂತಾಗಿದೆಯೆಂಬ ಸಂಗತಿಯನ್ನು ಸೂಕ್ಷ್ಮವಾಗಿ ಹಿಡಿದಿಡುತ್ತದೆ. ಇಂದಿನ ನಮ್ಮ ವ್ಯವಸ್ಥೆ 'ಕಾಣದ ಕೈ'ಗಳ ಬಂಧನದಲ್ಲಿ ಸಿಲುಕಿರುವ ದುರಂತವನ್ನು ಈ ಕಾದಂಬರಿ ಅದ್ಭುತವಾಗಿ ಧ್ವನಿಸುತ್ತದೆ. ಓದುಗನನ್ನು ಘಟನಾವಳಿಗಳ ಬೆನ್ನು ಹತ್ತುವಂತೆ ಮತ್ತು ಅಲ್ಲಿನ ಪ್ರತಿಯೊಂದು ಘಟನೆಗೂ ತೀವ್ರವಾಗಿ ಸ್ಪಂದಿಸುವಂತೆ ಮಾಡುತ್ತದೆ. ವ್ಯವಸ್ಥೆ ಎಲ್ಲಿ ಕುಸಿಯುತ್ತಿದೆ ಎಂಬ ಕಡೆಗೆ ಈ ಕಾದಂಬರಿ ಬೆಳಕು ಚೆಲ್ಲುತ್ತದೆ.

**ಮಾಯಾಲೋಕ:** ೨೦೦೫ರಲ್ಲಿ ಪ್ರಕಟವಾದ ಈ ಕೃತಿ ಅಪ್ಪಟ ತೇಜಸ್ವಿತನದಿಂದ ಸಮೃದ್ಧವಾಗಿದೆ. ಅರೆನಗರ ಅಥವಾ ಪಟ್ಟಣ ಪರಿಸರದ ದಟ್ಟ ವಿವರಗಳಿಂದ ಸಮೃದ್ಧವಾಗಿದೆ. ಅರೆನಗರದ ಬದುಕನ್ನು ಎಳೆ ಎಳೆಯಾಗಿ ತೆರೆದಿಟ್ಟಿರುವ ತೇಜಸ್ವಿ ಅವರು ಗಟ್ಟಿಯಾದ ಅನುಭವಗಳನ್ನು ಕಟ್ಟಿಕೊಡುವಲ್ಲಿ ಸಫಲರಾಗಿದ್ದಾರೆ. ಮಾಯಾಲೋಕ ಕಾದಂಬರಿಯೂ ಹೌದು ಪರಿಸರ ಮತ್ತು ಅರೆನಗರದ ಬದುಕಿನ ಒಂದು ಮಹಾಕಾವ್ಯವೂ ಹೌದೆನ್ನಬಹುದು. ವಿಭಿನ್ನ ಕಾಳಜಿಗಳನ್ನು ತನ್ನೊಡಲಲ್ಲಿ ಅಡಗಿಸಿಕೊಂಡಿರುವ ಕಾದಂಬರಿ ನಿಜವಾದ ಅರ್ಥದಲ್ಲಿ ಆಧುನಿಕ ಬದುಕಿನ ಮಾಯಾಲೋಕವನ್ನು ತೆರೆದಿಡುತ್ತದೆ.

**ಕಿರು ಕಾದಂಬರಿಗಳು :**

**ಸ್ವರೂಪ(೧೯೬೬):** ಇದು ತೇಜಸ್ವಿಯವರ ಮೊದಲ ಕಿರುಕಾದಂಬರಿ. ನವ್ಯ ಸಾಹಿತ್ಯದ ಬೌದ್ಧಿಕತೆಯ ನೆರಳಿನಲ್ಲಿ ಇದು ರೂಪುಗೊಂಡಿದೆ. ಹೇಮಂತ ಮತ್ತು ಶ್ರೀನಿವಾಸರ ಆತ್ಮನಿವೇದನೆಯಾಗಿ ಬೆಳೆಯುವ ಈ ಕಾದಂಬರಿ ಭೂತದ ಘಟನಾವಳಿಗಳ ನಿರೂಪಣೆಯ ಮೂಲಕ ವ್ಯಕ್ತಿತ್ವದ ಸ್ವರೂಪಗಳನ್ನು ಅನಾವರಣಗೊಳಿಸುತ್ತದೆ. ವ್ಯಕ್ತಿಯ ದುರಂತಕ್ಕೆ ಸಮಾಜನವೇ ಕಾರಣ. ಎಲ್ಲರ ಗಮನಕ್ಕೆ ಎಲ್ಲರೂ ಹೊಣೆಗಾರರು ಎಂಬ ನಿಲುವನ್ನು ಅಂತಿಮವಾಗಿ ಪ್ರಕಟಿಸುತ್ತದೆ.

**ನಿಗೂಢ ಮನುಷ್ಯರು(೧೯೭೩):** ಇದೊಂದು ನೀಳ್ಗಥೆ ಎನ್ನಬಹುದು. ಕರ್ವಾಲೋ ಮತ್ತು ಚಿದಂಬರ ರಹಸ್ಯಗಳ ಹಂದರದಲ್ಲೇ ಸಾಗುವ ಇದು ಕೌತುಕಗಳಿಂದ ಕೂಡಿದೆ. ಇಂಗ್ಲೀಷಿಗೆ ಅನುವಾದಗೊಂಡು ಪ್ರತಿಷ್ಠಿತ ಪೆಂಗ್ವಿನ್ ಪ್ರಕಾಶನದ ಮೂಲಕ ಪ್ರಕಟವಾಗಿದೆ.

**ಕಥಾ ಸಂಕಲನಗಳು:**

ತೇಜಸ್ವಿ ಹುಲಿಯೂರಿನ ಸರಹದ್ದು, ಅಬಚೂರಿನ ಪೋಸ್ಟಾಫೀಸು, ಕುಬಿ ಮತ್ತು ಇಯಾಲ ಹಾಗೂ ಕಿರಗೂರಿನ ಗಯ್ಯಾಳಿಗಳು ಎಂಬ ನಾಲ್ಕು ಕಥಾ ಸಂಕಲನಗಳನ್ನು ಪ್ರಕಟಿಸಿದರು. ಮೊದಲೇ ಹೇಳಿದಂತೆ ತೇಜಸ್ವಿ ಕಥನ ಕ್ರಮದಲ್ಲಿ ಪ್ರಾವೀಣ್ಯರು. ಈ ಪ್ರಾವೀಣ್ಯತೆ ಅವರನ್ನು ಕನ್ನಡದ ಶ್ರೇಷ್ಠ ಕತೆಗಾರರ ಸಾಲಿನಲ್ಲಿ ನಿಲ್ಲಿಸಿತು. ಪ್ರಮಾಣದ ದೃಷ್ಟಿಯಿಂದ ಹೆಚ್ಚು ಕಥೆಗಳನ್ನು ಬರೆಯದಿದ್ದರೂ ಗುಣಮಟ್ಟದಲ್ಲಿ ಇವುಗಳದೇ ಆದ ತೂಕ ಕನ್ನಡ ಸಾಹಿತ್ಯದಲ್ಲಿದೆ. ತೇಜಸ್ವಿಯವರ ಹಲವು ಕಥೆಗಳು ಇಂಗ್ಲೀಷ್ ಹಾಗೂ ಹಲವು ಭಾರತೀಯ ಭಾಷೆಗಳಿಗೆ ಅನುವಾಗೊಂಡಿವೆ. ಹಲವು ಪ್ರಶಸ್ತಿ ಪುರಸ್ಕಾರಗಳಿಗೆ ಪಾತ್ರವಾಗಿವೆ. ನಾಟಕವಾಗಿಯೂ ಪ್ರದರ್ಶನ ಕಂಡಿವೆ. ಇವರ 'ಅಬಚೂರಿನ ಪೋಸ್ಟಾಫೀಸು' ಮತ್ತು 'ತಬರನ ಕತೆ' ಚಲನಚಿತಗಳಾಗಿ ರಾಷ್ಟ್ರೀಯ ಚಲನಚಿತ್ರ ಪ್ರಶಸ್ತಿಗಳನ್ನು ಪಡೆದಿವೆ.

**ಹುಲಿಯೂರಿನ ಸರಹದ್ದು**(೧೯೬೨): ಇದು ತೇಜಸ್ವಿಯವರ ಮೊದಲ ಕಥಾಸಂಕಲನ. ಲಿಂಗಬಂಧ, ಪಂಜ್ರೊಳ್ಳಿಯ ಪಿಶಾಚಿಯ ಸವಾಲು, ಗುಡುಗು ಹೇಳಿದ್ದೇನು?, ಊರ್ವಶಿ, ಹುಲಿಯೂರಿನ ಸರಹದ್ದು, ಗಾಂಧೀಜಿ ದೆಸೆಯಿಂದ, ಎಂಬ ಆರು ಕಥೆಗಳು ಇಲ್ಲಿವೆ. ವ್ಯಕ್ತಿ ವಿಶಿಷ್ಟ ಸಿದ್ಧಾಂತಕ್ಕೂ ಮೊದಲು ಬರೆದ ಕಥೆಗಳು ಈ ಸಂಕಲನದಲ್ಲಿವೆ.

**ಅಬಚೂರಿನ ಪೋಸ್ಟಾಫೀಸು**(೧೯೭೩): ತೇಜಸ್ವಿ ನವ್ಯ ಸಾಹಿತ್ಯದಿಂದ ಸಂಪೂರ್ಣ ವಿಮುಖಗೊಂಡ ಸಂದರ್ಭದಲ್ಲಿ ಬಂದ ಕಥಾಸಂಕಲನವಿದು. ಇದಕ್ಕೆ ತೇಜಸ್ವಿ ಬರೆದಿರುವ ಮುನ್ನುಡಿ 'ಹೊಸದಿಗಂತದ ಕಡೆ' ಆವರೆಗಿನ ಕನ್ನಡ ಸಾಹಿತ್ಯವನ್ನು ಸಮಾಜ, ತಾತ್ವಿಕತೆ, ಚಳುವಳಿಗಳ ಓನ್ನೆಲೆಯಲ್ಲಿ ವಿಮರ್ಶೆಗೊಳಪಡಿಸುತ್ತದೆ ಮತ್ತು ಮುಂದೆ ಕನ್ನಡಕ್ಕೆ ಬೇಕಿರುವ ಸಾಹಿತ್ಯದ

ಸ್ವರೂಪವನ್ನು ಮಂಡಿಸುತ್ತದೆ. ಈ ಸಂಕಲನದ ಅಬಚೂರಿನ ಪೋಸ್ಟಾಫೀಸು ಕಥೆ ಚಲನಚಿತ್ರವಾಗಿ ರಾಷ್ಟ್ರೀಯ ಚಲನಚಿತ್ರ ಪ್ರಶಸ್ತಿ(೧೯೮೬) ಪಡೆದಿದೆ. ತಬರನ ಕತೆ ಆರ್.ನಾಗೇಶ್ ನಿರ್ದೇಶನದಲ್ಲಿ ನಾಟಕವಾಗಿ ಅನೇಕ ಪ್ರದರ್ಶನಗಳನ್ನು ಕಂಡಿದೆ. ಕೃತಿರೂಪದಲ್ಲಿಯೂ ಪ್ರಕಟವಾಗಿ(೧೯೮೬) ಚನಲಚಿತ್ರವಾಗಿ ಅತ್ಯುತ್ತಮ ಕಥೆ ಮತ್ತು ಸಂಭಾಷಣೆಗಾಗಿ 'ರಾಷ್ಟ್ರೀಯ ಸ್ವರ್ಣಕಮಲ'ಪ್ರಶಸ್ತಿ(೧೯೮೮) ಪಡೆದಿದೆ.

**ಕುಬಿ ಮತ್ತು ಇಯಾಲ:** ಕುಬಿ ಮತ್ತು ಇಯಾಲ ಚಲನಚಿತ್ರವಾಗಿ ರಾಜ್ಯ ಮತ್ತು ರಾಷ್ಟ್ರೀಯ ಚಲನಚಿತ್ರ ಪ್ರಶಸ್ತಿಗಳನ್ನು(೧೯೯೦) ಪಡೆದಿದೆ. 'ತುಕ್ಕೋಜಿ ಮತ್ತು ಅವನತಿ' ಕಥೆಗಳನ್ನು ಒಳಗೊಂಡು, ಈ ಸಂಕಲನದ ಕಥೆಗಳು ಮರಾಠಿ, ಹಿಂದಿ, ತಮಿಳು, ಮಲಯಾಳಂ ಹಾಗೂ ಇಂಗ್ಲೀಷ್ ಭಾಷೆಗಳಿಗೆ ಅನುವಾದಗೊಂಡಿವೆ.

**ಕಿರಗೂರಿನ ಗಯ್ಯಾಳಿಗಳು(೧೯೯೧):** ಇದು 'ಕಿರಗೂರಿನ ಗಯ್ಯಾಳಿಗಳು', 'ಕೃಷ್ಣೇಗೌಡನ ಆನೆ', 'ಮಾಯಾಮೃಗ', 'ರಹಸ್ಯವಿಶ್ವ', ಎಂಬ ನಾಲ್ಕು ಕಥೆಗಳ ಸಂಗ್ರಹ. ಕರ್ನಾಟಕ ಸಾಹಿತ್ಯ ಅಕಾಡೆಮಿ ಶ್ರೇಷ್ಠ ಸೃಜನಶೀಲ ಕೃತಿ ಪ್ರಶಸ್ತಿ(೧೯೯೨) ಪಡೆದಿದೆ. ಮೊದಲ ಕತೆ 'ಕಿರಗೂರಿನ ಗಯ್ಯಾಳಿಗಳು' ಸ್ತ್ರೀವಾದಿಗಳಿಂದ ತುಂಬ ಪ್ರಶಂಸೆ ಪಡೆದಿದ್ದು, ಹಿಂದಿ, ಇಂಗ್ಲೀಷ್, ಮಲಯಾಳಂ ಭಾಷೆಗಳಿಗೆ ಅನುವಾದಗೊಂಡಿದೆ. ಅ.ನ.ರಾವ್‌ಜಾದವ್ ಅವರಿಂದ ನಾಟಕವಾಗಿ ಅನೇಕ ಪ್ರದರ್ಶನ ಕಂಡಿದೆ. ಅವರ ರಂಗಕೃತಿಯೂ ಪುಸ್ತಕವಾಗಿ ಪ್ರಕಟವಾಗಿದೆ. ಕೃಷ್ಣೇಗೌಡನ ಆನೆ ಕೂಡ ರಂಗರೂಪ ಪಡೆದಿದೆ. ಮಾಯಾಮೃಗ ಆ ಅವಧಿಯಲ್ಲಿ ಪ್ರಕಟವಾದ ರಾಷ್ಟ್ರದ ಅತ್ಯುತ್ತಮ ಹದಿಮೂರು ಕತೆಗಳಲ್ಲಿ ಒಂದೆಂದು ದೆಹಲಿಯ 'ಕಥಾ'ಪ್ರಶಸ್ತಿ ಪಡೆದಿದೆ. ಹಿಂದಿ, ಮರಾಠಿ, ಒರಿಯಾ, ಬಂಗಾಳಿ ಭಾಷೆಗಳಿಗೂ ಅನುವಾದಗೊಂಡಿದೆ. ಕೃಷ್ಣೇಗೌಡನ ಆನೆ ಇಂಗ್ಲೀಷ್ ಮತ್ತು ಹಿಂದಿ ಭಾಷೆಗಳಿಗೆ ಅನುವಾದಗೊಂಡಿದೆ.

**ಕವನ ಸಂಕಲನ:**

ತೇಜಸ್ವಿ ಬರೆದದ್ದು ಒಂದೇ ಕವನ ಸಂಕಲನ. ತೇಜಸ್ವಿ ಅದನ್ನು ಪ್ರಕಟಿಸಲೇ ಇಲ್ಲ. ಯಾಕೋ ಏನೋ ತಮ್ಮದೇ ಕವನಗಳನ್ನು ಬೇರೆಯವರ ಹೆಸರಿನಲ್ಲಿ ಬರೆದರು. ಇತ್ತೀಚಿನ ದಿನಗಳಲ್ಲಿ ಅವನ್ನು ಪ್ರಕಟಿಸಲಾಯಿತಾದರೂ ಹೆಸರು ಮಾತ್ರ ಬೇರೆಯದೇ ಇತ್ತು. ಆದರೂ ಕವನವನ್ನು ಓದಿದ ಹಲವರಿಗೆ ಇವು ತೇಜಸ್ವಿಯವರ ಕವನಗಳೇ ಎಂಬ ಗುಮಾನಿ ಇತ್ತು. ತೇಜಸ್ವಿ ತೀರಿಕೊಂಡ ಮೇಲೆ ಅವರ ಪತ್ನಿ ರಾಜೇಶ್ವರಿಯವರೆ ಶಿವಾರೆಡ್ಡಿಯವರ ಬಳಿ ಈ ಸತ್ಯವನ್ನು ಹೇಳುವುದರೊಂದಿಗೆ ಎಲ್ಲರ ಗುಮಾನಿ ನಿಜವಾಗಿದೆ.

**ಸೋಮುವಿನ ಸ್ವಗತ ಲಹರಿ(೧೯೬೨):** ಇದು ತೇಜಸ್ವಿ ಅವರ ಏಕೈಕ ಕವನ ಸಂಕಲನ. ರಾಜಕೀಯ ವಿಡಂಬನೆ, ಹತಾಶೆ, ಅಸಹಾಯಕತೆ, ಸಿಟ್ಟು, ಅಪ್ರಕಟಿತ ಪ್ರೇಮ, ಈ ಸಂಕಲನದ ವಸ್ತುಗಳಾಗಿವೆ, ಬೃಹನ್ನಳೆ ಸೋಮುವಿನ ಸ್ವಗತ ಲಹರಿಯಾಗಿವೆ. ನವ್ಯ ಸಾಹಿತ್ಯದ ಔನ್ನತ್ಯದ

ಕಾಲದಲ್ಲಿ ರಚನೆಗೊಂಡ ಅದರಿಂದ ಪ್ರಭಾವಿತಗೊಂಡಿದ್ದರೂ ಇಲ್ಲಿನ ಕವಿತೆಗಳನ್ನು ನವ್ಯದ ಮನೋಧರ್ಮದ ಬಗೆಗಿನ ತಿರಸ್ಕಾರ, ವ್ಯಂಗ್ಯಗಳಿವೆ.

**ನಾಟಕ:**

**ಯಮಳ ಪ್ರಶ್ನೆ(೧೯೬೪):** ಇದು ತೇಜಸ್ವಿಯವರ ಏಕೈಕ ನಾಟಕ. ಇದೊಂದು ಅಸಂಗತ ನಾಟಕವಾಗಿದ್ದು ತೇಜಸ್ವಿ ನವ್ಯ ಮಾರ್ಗದಲ್ಲಿದ್ದಾಗ ಬರೆಯಲ್ಪಟ್ಟಿತು. ಮಾರ್ಗಮಧ್ಯೆ ಕೆಟ್ಟುನಿಂತ ಮೋಟಾರು ಬೈಕು ಮತ್ತು ತರುಣರಿಬ್ಬರ ಸಂವಾದದ ಸುತ್ತ ಸಾಗುವ ಈ ನಾಟಕ ಮುಕ್ತಾಯವಾಗುವಲ್ಲಿ ಜೀವನದ ಸಂಕೀರ್ಣತೆಯನ್ನು ಬಿಂಬಿಸುವ ಹಲವು ಪ್ರಸಂಗಗಳು ಬಂದು ಹೋಗುತ್ತವೆ. ಇಲ್ಲಿನ ಮೋಟಾರು ಬೈಕು, ಚಿಕಿತ್ಸೆಗೆ ಸಾಧಿಸಲಾಗದ ವ್ಯರ್ಥ ಮಾತುಗಳಾಗಿ ಅರ್ಥರಾಹಿತ್ಯವಾಗಿ ಕಾಣುತ್ತವೆ.

**ಪ್ರವಾಸ ಕಥನ:**

**ಅಲೆಮಾರಿಯ ಅಂಡಮಾನ್ ಮತ್ತು ಮಹಾನದಿ ನೈಲ್(೧೯೯೦):** ಇದು ತೇಜಸ್ವಿ ಅವರ ಪ್ರವಾಸದ ಅನುಭವ ಕಥನ. ೧೯೯೧ರ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪಡೆದಿದೆ. ಮೂರು ವರ್ಷಗಳಲ್ಲಿ ಮೂರು ಮುದ್ರಣಗಳನ್ನು ಕಂಡಿದ್ದು, ಗುಲ್ಬರ್ಗ ಮತ್ತು ಕುವೆಂಪು ವಿಶ್ವವಿದ್ಯಾಲಯಗಳ ಪದವಿ ತರಗತಿಗಳಿಗೆ ಪಠ್ಯವೂ ಆಗಿತ್ತು. ಅಂಡಮಾನ್ ದ್ವೀಪಗಳು ಮತ್ತು ಆಫ್ರಿಕಾದ ನೈಲ್‌ನದಿ ಸಾಹಸಯಾತ್ರೆಯ ಈ ಕಥಾನಕ ವಿಶಿಷ್ಟ ನಿರೂಪಣೆಯಾಗಿದೆ. ನಿರೂಪಕನ ರಾಜಕೀಯ, ಸಾಮಾಜಿಕ, ತಾತ್ವಿಕ ವಿವೇಚನೆಗಳೂ ಇದರೊಂದಿಗೆ ಸಾಗುವುದರಿಂದ ಇಲ್ಲಿ ಓದುಗನ ಮನಸ್ಸು ಏಕಮುಖವಾಗಿ ಸಾಗದೆ ಜ್ಞಾನದ ಹಲವು ದಿಕ್ಕುಗಳಿಗೆ ಹರಿಯುವಂತಾಗುತ್ತದೆ. ಇದು ಕನ್ನಡ ಪ್ರವಾಸ ಸಾಹಿತ್ಯಕ್ಕೆ ಹೊಸ ಕಥನ ತಂತ್ರವನ್ನು ರೂಪಿಸಿಕೊಟ್ಟ ಕೃತಿ.

**ವೈಚಾರಿಕ ಬರಹ:**

ತೇಜಸ್ವಿ ಬರೆದ ಪರಿಸರ ಮತ್ತು ವೈಜ್ಞಾನಿಕ ಕಥೆಗಳಲ್ಲಿ ವೈಚಾರಿಕತೆಯ ಹೊಳಹುಗಳಿದ್ದರೂ ಅಪ್ಪಟ ವೈಚಾರಿಕ ಬರಹ ಎಂದು ಹೇಳಬಹುದಾದ ಕೃತಿ ಅವರ 'ವ್ಯಕ್ತಿ ವಿಶಿಷ್ಟ ಸಿದ್ಧಾಂತ' ಒಂದೇ.

**ವ್ಯಕ್ತಿ ವಿಶಿಷ್ಟ ಸಿದ್ದಾಂತ(೧೯೬೪):** ಇದೊಂದು ವೈಚಾರಿಕ ಬರಹ. ಲಹರಿ ಬುದ್ಧಿಪ್ರಚಾರ ಯೋಜನೆಯಡಿ ಪ್ರಕಟವಾದ ವೈಚಾರಿಕ ಕೃತಿ. 'ಅಲಕ್ಷ್ಯ ಮತ್ತು ಸಂಸ್ಕೃತಿ ಸ್ಥಿತಿ', 'ವ್ಯಕ್ತಿ ವಿಶಿಷ್ಟ ಸಿದ್ಧಾಂತ', 'ವ್ಯಕ್ತಿ ವಿಶಿಷ್ಟವಾದಿ, ವಿವಾಹ, ಪ್ರೇಮ' ಎನ್ನುವ ಮೂರು ಲೇಖನಗಳನ್ನು ಒಳಗೊಂಡಿವೆ. ಸ್ವಲ್ಪಮಟ್ಟಿಗೆ ಅಸ್ತಿತ್ವವಾದಿ ಸಿದ್ಧಾಂತದ ತಾತ್ವಿಕತೆಗಳನ್ನು ಹೋಲುತ್ತದೆ.

**ಜೀವನಚರಿತ್ರೆ/ಆತ್ಮಚರಿತ್ರೆ:**

ತೇಜಸ್ವಿ ಯಾರ ಜೀವನವನ್ನು ಕುರಿತೂ ಜೀವನ ಚರಿತ್ರೆಗಳನ್ನು ಬರೆಯಲಿಲ್ಲ. ಹಾಗೆ ಇದು ನನ್ನ ಆತ್ಮಕಥೆ ಎಂದು ಹೇಳಿಕೊಂಡು ಯಾವ ಆತ್ಮಚರಿತ್ರೆಯನ್ನೂ ಬರೆಯಲಿಲ್ಲ. ಬದಲಿಗೆ ಅವರ

ವಿವಿಧ ಕೃತಿಗಳೇ ಅವರ ಆತ್ಮಚರಿತ್ರೆಗಳೂ ಆಗಿವೆ. ಜೀವನ ಚರಿತ್ರೆ ಎಂಬ ಸಾಲಿಗೆ ಸೇರಿಸಬಹುದಾದರೆ ಅದು ಅವರ 'ಅಣ್ಣನ ನೆನಪು' ಮಾತ್ರ. ಇನ್ನು ಅವರ ವಿವಿಧ ಬರಹಗಳನ್ನು ಮುಖ್ಯವಾಗಿ ಅವರ ಕಾದಂಬರಿಗಳನ್ನು ಶೋಧಿಸಿದರೆ ಅವರ ಆತ್ಮಕಥನದ ವಿವರಗಳು ದೊರಕುತ್ತವೆ. ಅವರ ಎಲ್ಲಾ ಕಾದಂಬರಿಗಳಲ್ಲೂ ತೇಜಸ್ವಿ ನಿರೂಪಕರಾಗಿ ಒಂದು ಪಾತ್ರವಾಗಿ ಬರುವುದರಿಂದ ಲೇಖಕರ ನೈಜ ಬದುಕಿನ ವಿವರಗಳು ಕಾದಂಬರಿಯಲ್ಲಿ ದಾಖಲಾಗುತ್ತವೆ. ಹೀಗಾಗಿ ಅವರ ಕಾದಂಬರಿಗಳು ಏಕಕಾಲದಲ್ಲಿ ಕಾದಂಬರಿಗಳಾಗಿಯೂ ಮತ್ತು ತೇಜಸ್ವಿಯವರ ಆತ್ಮಕಥನಗಳಾಗಿಯೂ ಮೂಡಿಬಂದಿವೆ.

**ಅಣ್ಣನ ನೆನಪು(೧೯೯೬):** ತೇಜಸ್ವಿಯವರು ತಮ್ಮ ತಂದೆ ಕುವೆಂಪು ಅವರನ್ನು ಕುರಿತು ಬರೆದಿರುವ ನೆನಪುಗಳ ಸಂಗ್ರಹ ಈ 'ಅಣ್ಣನ ನೆನಪು'. ಇಲ್ಲಿ ತೇಜಸ್ವಿ ಕುವೆಂಪು ಅವರ ಕೌಟುಂಬಿಕ ಮತ್ತು ಸಾಮಾಜಿಕ ವ್ಯಕ್ತಿತ್ವವನ್ನು ತಮ್ಮ ದೃಷ್ಟಿಕೋನದಲ್ಲಿ ನಿರೂಪಿಸಿದ್ದಾರೆ. ಇಲ್ಲಿ ಕುವೆಂಪು ಅವರ ಎಲ್ಲ ಕೌಟುಂಬಿಕ ಮತ್ತು ಖಾಸಗೀ ವಿವರಗಳು ಜೊತೆಗೆ ತೇಜಸ್ವಿಯವರ ವೈಯಕ್ತಿಕ ವಿಚಾರಗಳೂ ಅಧಿಕೃತವಾಗಿ ದಾಖಲಾಗುವುದರಿಂದ ಏಕಕಾಲಕ್ಕೆ ಇದು ಕುವೆಂಪು ಅವರ ಜೀವನ ಚರಿತ್ರೆಯೂ ತೇಜಸ್ವಿ ಅವರ ಆತ್ಮಚರಿತ್ರೆಯೂ ಆಗಿದೆ. ಇನ್ನೊಂದೆಡೆ ಎಲಿಯಟ್, ನೆಹರೂ, ಲೋಹಿಯಾ, ಕನ್ನಡ ಚಳುವಳಿಗಳು, ಕರ್ನಾಟಕ ಏಕೀಕರಣ, ಎಪ್ಪತ್ತರ ದಶಕದ ಬರಹಗಾರರ ಒಕ್ಕೂಟ. ಬೂಸಾ ಪ್ರಕರಣ ಇತ್ಯಾದಿ ಹಲವು ವಿಚಾರಗಳನ್ನು ದಾಖಲಿಸುವ ಮೂಲಕ ಒಂದು ಕಾಲಘಟ್ಟದ ಸಾಂಸ್ಕೃತಿಕ ದಾಖಲೆಯೂ ಆಗಿರುವಂತೆ ಅದರ ವಿಶ್ಲೇಷಕ ಕೃತಿಯೂ ಆಗಿದೆ. ಕರ್ನಾಟಕ ಸಾಂಸ್ಕೃತಿಕ ಚರಿತ್ರೆಯನ್ನು ಅಧ್ಯಯನ ಮಾಡುವವರಿಗೆ 'ಅಣ್ಣನ ನೆನಪು' ಒಂದು ಆಕರ ಗ್ರಂಥ. ಒಟ್ಟು ನಲವತ್ತೊಂಬತ್ತು ಅಧ್ಯಾಯಗಳಲ್ಲಿ ಕುವೆಂಪು ಅವರನ್ನು ಕುರಿತ ತೇಜಸ್ವಿಯವರ ನೆನಪುಗಳು ಬಿಚ್ಚಿಕೊಂಡಿವೆ.

**ಪರಿಸರ ಮತ್ತು ಜೀವವಿಜ್ಞಾನ**

ಪರಿಸರದ ಬಗ್ಗೆ ಅಪಾರವಾದ ಪ್ರೀತಿ ಮತ್ತು ಕಾಳಜಿ ಹೊಂದಿದ್ದ ತೇಜಸ್ವಿ ಪರಿಸರವವನ್ನೇ ವಸ್ತುವಾಗುಳ್ಳ ಹಲವು ಕಥೆಗಳನ್ನು ಬರೆದರು. ವಿಜ್ಞಾನದ ಬಗೆಗೂ ಹೆಚ್ಚು ಆಸಕ್ತಿ ಹೊಂದಿದ್ದ ತೇಜಸ್ವಿ ವಿಜ್ಞಾನವನ್ನೇ ವಸ್ತುವಾಗಿಸಿಕೊಂಡು ಕಥೆಗಳನ್ನು ರಚಿಸಿದರು. ಈ ವಿಭಾಗದಲ್ಲಿ ಪರಿಸರ ಮತ್ತು ವಿಜ್ಞಾನವನ್ನು ವಸ್ತುವಾಗುಳ್ಳ ಕಥೆಗಳೊಂದಿಗೆ ಪರಿಸರವನ್ನು ಕುರಿತ ವಸ್ತುನಿಷ್ಟ ವಿವರಣಾತ್ಮಕ ಬರಹಗಳೂ ಸೇರಿವೆ. ಪರಿಸರ ಮತ್ತು ವಿಜ್ಞಾನವನ್ನು ಕಥಾ ರೂಪದಲ್ಲಿ ಬರೆದ ಮೊದಲ ಲೇಖಕ ತೇಜಸ್ವಿ.

ಜೀವ ವಿಜ್ಞಾನದ ಬಗ್ಗೆ ಬರೆಯುವ ತೇಜಸ್ವಿ ಹಕ್ಕಿ-ಪಕ್ಷಿಗಳು. ಅವುಗಳ ವಿಧಗಳು, ಅವುಗಳ ಜೀವನ ವಿಧಾನ, ಸ್ವಭಾವ, ವಲಸೆ ಮುಂತಾಗಿ ಕನ್ನಡ ನಾಡಿನ ಮತ್ತು ದೇಶದ ಇತರೆ ಭಾಗದ ಹಕ್ಕಿಗಳ ಪರಿಚಯ ಮಾಡಿಕೊಡುವ ಹಾಗೂ ವಿವಿಧ ಕೀಟಗಳನ್ನು ಪರಿಚಯಿಸುವ ಕೃತಿಗಳನ್ನು ಬರೆದರು. ಇವು ತೇಜಸ್ವಿ ಒಬ್ಬ ಜೀವವಿಜ್ಞಾನಿಯೂ ಆಗಿದ್ದರು ಎನ್ನುವುದನ್ನು ಸಾರಿ ಹೇಳುತ್ತವೆ.

**ಪರಿಸರದ ಕಥೆ(೧೯೯೦):** ಇದೊಂದು ಹೊಸರೀತಿಯ ಬರವಣಿಗೆ. ಮಾನೀಟರ್, ಕಿವಿಯೊಡನೆ ಒಂದು ದಿನ, ಮಾಸ್ತಿ ಮತ್ತು ಬೈರ, ಸುಸ್ಮಿತ ಮತ್ತು ಹಕ್ಕಿಮರಿ, ಎಂಗ್ಟನ ಪುಂಗಿ,

ಕುಕ್ಕುಟ ಪಿಶಾಚ, ಮೂಲಿಕೆ ಬಳ್ಳಿಯ ಸುತ್ತ ಮುಂತಾದ ಪರಿಸರವನ್ನು ಕುರಿತ ಹದಿನಾಲ್ಕು ಬರಹಗಳಿವೆ. ಕರ್ನಾಟಕ ಸಾಹಿತ್ಯ ಅಕಾಡೆಮಿ ಈ ಕೃತಿಯನ್ನು ಕಥಾತ್ಮಕ ಪ್ರಬಂಧಗಳ ಸಾಲಿಗೆ ಸೇರಿಸಿ ಪ್ರಶಸ್ತಿ(೧೯೯೨) ನೀಡಿದೆ. ಇದು ಹದಿಮೂರು ಮುದ್ರಣಗಳನ್ನು ಕಂಡಿದೆ.

**ಏರೋಪ್ಲೇನ್ ಚಿಟ್ಟೆ ಮತ್ತು ಇತರ ಕಥೆಗಳು(೧೯೯೩):** ಇದರಲ್ಲಿ ಒಟ್ಟು ಹದಿನೇಳು ಕಥೆಗಳಿವೆ. ಒಂಟೆಹುಳು, ಏರೋಪ್ಲೇನ್ ಚಿಟ್ಟೆ, ಬಾವಲಿಗಳ ಅತೀಂದ್ರಿಯ ವಿಸ್ಮಯ, ಸರ್ಪದೃಷ್ಟಿ, ಜೀಂಕ್ರ ಮತ್ತು ಅರಿಸ್ಟಾಟಲ್, ಹಾವು ಮೀನಿನ ಪ್ರಚಂಡಯಾನ. ಅಕ್ಕಮ್ಮ ಹೇಳಿದ ಕಥೆ, ಹಲ್ಲಿಯ ಪ್ರಾಣ ಬಾಲದಲ್ಲಿ, ನಾವು ಕೊಂದ ಹಕ್ಕಿ– ಮುಂತಾದ ಕಥೆಗಳು ಇಲ್ಲಿ ವೈಚಾರಿಕ ನೆಲೆಯಲ್ಲಿ ಬರೆಯಲ್ಪಟ್ಟಿವೆ. ಇವು ಮೂಲತಃ ವೈಜ್ಞಾನಿಕ ಬರಹಗಳಾಗಿದ್ದರೂ ಕಥನಕ್ರಮದ ಅಭಿವ್ಯಕ್ತಿಯಿಂದ ಕಲಾತ್ಮಕತೆಯನ್ನು ಪಡೆದುಕೊಂಡಿವೆ.

**ಕಿರಿಯರಿಗಾಗಿ ಪರಿಸರ(೧೯೬೨):** ಇದು ತೇಜಸ್ವಿ ನಾಗೇಶ್ ಹೆಗಡೆ, ಮತ್ತು ಟಿ.ಎಸ್.ವಿವೇಕಾನಂದ್ ಅವರೊಂದಿಗೆ ಸೇರಿ ಮಕ್ಕಳಿಗಾಗಿ ರಚಿಸಿರುವ ಪುಸ್ತಕ. ಪರಿಸರದ ಬಗೆಗಿನ ತಿಳುವಳಿಕೆಯನ್ನು ಸಂಕ್ಷಿಪ್ತವಾಗಿ ಕೊಡುವ ಉದ್ದೇಶದಿಂದ ಸರಳವಾದ ಭಾಷೆಯಲ್ಲಿ ಈ ಕೃತಿಯನ್ನು ರಚಿಸಲಾಗಿದೆ. ತೇಜಸ್ವಿ ಈ ಕೃತಿಯಲ್ಲಿ ಸೌರಶಕ್ತಿಯ ವಿಶ್ವರೂಪ, ಇಕಾಲಜಿಯ ಸರಪಳಿ, ಪರಿಸರಕ್ಕೆ ತಕ್ಕ ರೂಪ ಬದಲಾವಣೆ, ಮಳೆ ಬರಿಸಲು ಸಾಧ್ಯವೇ?, ಆಪರೇಷನ್ ಫ್ಲೆಮಿಂಗೋ, ಸರ್ವನಾಶದಿಂದ ಮೇಲೆದ್ದ ಬಫೆಲೋ, ಇತ್ಯಾದಿ ಅಧ್ಯಾಯಗಳಲ್ಲಿ ಮಕ್ಕಳಿಗೆ ಪರಿಸರವನ್ನು ದಕ್ಕಿಸಿಕೊಡುವ ಪ್ರಯತ್ನ ನಡೆಸಲಾಗಿದೆ.

**ಸಹಜ ಕೃಷಿ(೧೯೯೨):** ಇದು ಜಪಾನಿನ ಸಹಜ ಕೃಷಿ ತಜ್ಞ ಫುಕುವೋಕಾನನ್ನು ಪರಿಚಯಿಸುವ ಕೃತಿ. ಫುಕುವೋಕ ತನ್ನ ಜೀವನದುದ್ದಕ್ಕೂ ಕೃಷಿಯಲ್ಲಿ ಅನೇಕ ಪ್ರಯೋಗಗಳನ್ನು ನಡೆಸಿದರು. ತನ್ನ ಸಹಜ ಬೇಸಾಯ ಪದ್ದತಿಗೆ ಈತ ನಾಲ್ಕು ಮೂಲ ತತ್ವಗಳನ್ನು ಮಂಡಿಸಿದ. ನೆಲವನ್ನು ಉಳದೆ ಬೀಜಗಳನ್ನು ಬಿತ್ತಬೇಕು, ಯಾವುದೇ ರಸಾಯನಿಕ ಗೊಬ್ಬರ ಬಳಸಬಾರದು, ಕಳೆ ಕೀಳಬಾರದು, ಹಾಗೂ ಕ್ರಿಮಿನಾಶಕ ಸಿಂಪರಣೆಯನ್ನು ನಿಲ್ಲಿಸಬೇಕು ಎಂದ. ಆಧುನಿಕ–ದುಬಾರಿ ಬೇಸಾಯ ಪದ್ಧತಿಗಳಿಂದ ಆತ್ಮಹತ್ಯೆ ಮಾಡಿಕೊಳ್ಳುವ ಸ್ಥಿತಿ ತಲುಪಿರುವ ರೈತರಿಗೂ ಮತ್ತು ಸತ್ವ ಕಳೆದುಕೊಂಡಿರುವ ನೆಲಕ್ಕೂ ಫುಕುವೋಕಾನ ಚಿಂತನೆಗಳು ಸ್ಫೂರ್ತಿಯ ಚಿಲುಮೆಯಾಗಬಲ್ಲವು. ಆತನ ವಿಚಾರಗಳ ಮೂಲಕ ತೇಜಸ್ವಿ ಕನ್ನಡಿಗರಿಗೆ ಇಲ್ಲಿ ಸಹಜ ಕೃಷಿ ಪದ್ಧತಿಯನ್ನು ಪರಿಚಯಿಸಿದ್ದಾರೆ. ಸಹಜ ಕೃಷಿ ಏಳು ಮುದ್ರಣಗಳನ್ನು ಕಂಡಿದೆ.

**ದಕ್ಷಿಣ ಭಾರತದ ಹಕ್ಕಿಗಳು:** ಇದು ಕೃಷಿ ವಿಶ್ವವಿದ್ಯಾಲಯದ ಚಕ್ರವರ್ತಿ ಅವರೊಡನೆ ಸೇರಿ ರಚಿಸಿರುವ ಪುಸ್ತಕ. ಪಕ್ಷಿ ವೀಕ್ಷಕರ ಕೈಪಿಡಿ ಎನಿಸಿದೆ.

**ಮಿಂಚುಳ್ಳಿ(೧೯೯೪) (ಕನ್ನಡ ನಾಡಿನ ಹಕ್ಕಿಗಳು ಭಾಗ ೧):** ಇದು ಕನ್ನಡ ನಾಡಿನ ಪಕ್ಕಿಗಳ ಮಾಲಿಕೆಯ ಮೊದಲನೇ ಭಾಗ. ವರ್ಣಚಿತ್ರಗಳೊಡನೆ ಹಕ್ಕಿಗಳ ವಿವರಗಳನ್ನು ದಾಖಲಿಸುತ್ತ ಅವುಗಳ

ಬಗೆಗೆ ನಮ್ಮನ್ನು ಆಸಕ್ತರಾಗುವಂತೆ ಮಾಡುತ್ತದೆ. ಇಲ್ಲಿನ ಬರಹಗಳು ಕೇವಲ ಪಕ್ಷಿ ವೀಕ್ಷಕರಿಗೆ ಮಾತ್ರವಲ್ಲ. ಎಲ್ಲ ರೀತಿಯ ಓದುಗರಿಗೂ ಆಪ್ತವಾಗುವ ಬರವಣಿಗೆಯಿದು. ಮುಂಗಟ್ಟೆ ಪಕ್ಕಿ, ಮರಕುಟಿಕ, ಹೂವಿನ ಪಕ್ಕಿ, ಪಾರಿವಾಳ, ಕಾಡು ಪಾರಿವಾಳ, ಬಾಳೆಗುಬ್ಬಿ, ಕೋಗಿಲೆ ಮತ್ತು ಕೆಂಬೂತ ಮುಂತಾದ ಹಕ್ಕಿಗಳ ಚೇತೋಹಾರಿಯಾದ ನಿರೂಪಣೆ ಇಲ್ಲಿದೆ.

**ಹೆಜ್ಜೆ ಮೂಡದ ಹಾದಿ(೧೯೯೬) (ಕನ್ನಡ ನಾಡಿನ ಹಕ್ಕಿಗಳು ಭಾಗ೨):** ಇದು ಕನ್ನಡ ನಾಡಿನ ಪಕ್ಕಿಗಳ ಮಾಲಿಕೆಯಲ್ಲಿ ಎರಡನೆ ಭಾಗ. ಕನ್ನಡ ನಾಡಿನ ಹಕ್ಕಿಗಳ ಜೊತೆಗೆ ಅವನ್ನು ಹೋಲುವ ಇತರೆ ನಾಡು ದೇಶಗಳ ಪಕ್ಷಿಗಳ ಪರಿಚಯವೂ ಇಲ್ಲಿದೆ. ಈ ದೃಷ್ಟಿಯಿಂದ ಇದು ಮೊದಲನೆ ಭಾಗಕ್ಕಿಂತ ಹೆಚ್ಚು ವಿಸ್ತಾರ, ವೈವಿಧ್ಯತೆಯುಳ್ಳದ್ದಾಗಿದೆ. ಸೌರೋಲೋಪಸ್, ಜವುಗಿನ ಹಕ್ಕಿಗಳು, ಗಿಳಿಗಳು, ಟ್ರೋಜನ್ ಮತ್ತು ಆಫ್ರಿಕಾದ ಮೂಷಿಕ, ಕಾಡುಕೋಳಿಗಳು, ಚಿಟ್ಟುಕೋಳಿಗಳು, ನೀರಿನ ಹಕ್ಕಿ, ಟುವ್ವಿ, ಮಡಿವಾಳ ಹಕ್ಕಿ ಮುಂತಾದ ವಿವಿಧ ಜಾತಿಯ ಪಕ್ಷಿಗಳ ಕುರಿತ ನಿರೂಪಣೆಯಿದೆ.

**ಹಕ್ಕಿಪುಟ್ಟ(೧೯೯೭):** ಇದು ೧೯೧ ಪಕ್ಷಿಗಳ ಪರಿಚಯ ಮಾಡಿಕೊಡುವ ಪುಸ್ತಕ. ಪ್ರತಿ ಪುಟದಲ್ಲಿಯೂ ಒಂದು ಹಕ್ಕಿಯ ವರ್ಣಚಿತ್ರ. ಅದರ ಗಾತ್ರ, ಅದರ ಸ್ವಭಾವ, ತೆಗೆದುಕೊಳ್ಳುವ ಆಹಾರ, ಗೂಡು ಕಟ್ಟಿಕೊಳ್ಳುವ ರೀತಿ ಸಂತಾನೋತ್ಪತ್ತಿ, ವಲಸೆ, ವಾಸಿಸುವ ಪ್ರಾದೇಶಿಕ ನಕ್ಷೆ, ಈ ಮೊದಲಾದ ಸಂಕ್ಷಿಪ್ತ ವಿವರಗಳಿವೆ. ಹಕ್ಕಿಗಳಿಗೆ ಜನಬಳಕೆಯ ಹೆಸರುಗಳನ್ನೇ ಕೊಟ್ಟಿದ್ದು, ಕೆಳಗೆ ಅವುಗಳ ಇಂಗ್ಲೀಷ್ ಹೆಸರನ್ನೂ ಕೊಡಲಾಗಿದೆ. ಇಂಗ್ಲೀಷಿನಲ್ಲಿ ಸಲೀಂ ಅಲಿಯವರ 'ದಿ ಬುಕ್ ಆಫ್ ಇಂಡಿಯನ್ ಬರ್ಡ್ಸ್' ಪುಸ್ತಕವಿದ್ದರೂ ಭಾರತೀಯ ಭಾಷೆಗಳ ಮಟ್ಟಿಗೆ ಆ ಬಗೆಯದು ಇದೊಂದೆ.

**ನಡೆಯುವ ಕಡ್ಡಿ! ಹಾರುವ ಎಲೆ(ಹುಳಗಳ ಕೋಶ–೧):** ತೇಜಸ್ವಿ ಮತ್ತು ಡಾ.ವಿ.ವಿ. ಬೆಳವಾಡಿ ರಚಿಸಿರುವ ಪುಸ್ತಕವಿದು. ನಮ್ಮ ಸುತ್ತಮುತ್ತಲೇ ವಾಸಿಸುತ್ತಿರುವ, ನಾವೆಂದೂ ಕುತೂಹಲ ತಾಳದ ಕೀಟಗಳನ್ನು ಕಥೆಯ ರೂಪದಲ್ಲಿ ಪುಸ್ತಕ ಪರಿಚಯಿಸುತ್ತಲೇ ಚಿಟ್ಟೆ, ಜೇಡ, ಜೀರುಂಡೆ, ಜಿರಳೆ, ಮಿಡತೆ, ಮಿಂಚುಹುಳು–ಇಂಥ ಅಸಂಖ್ಯ ಕೀಟಗಳನ್ನು, ಪ್ರಕೃತಿ ವಿಕೋಪಗಳು ಮತ್ತು ಮನುಷ್ಯನಿಂದಾಗುತ್ತಿರುವ ಅನಾಹುತಗಳನ್ನು ಎದುರಿಸಿ ಹೇಗೆ ಬದುಕುತ್ತಿವೆ?, ಅವುಗಳ ಜೀವವಿಕಾಸದ ಅವಸ್ಥಾಂತರಗಳ ಕಥೆಯೇನು ಎಂಬ ವಿಷಯಗಳನ್ನು ಸಂಶೋಧನೆ ಮತ್ತು ದೈನಂದಿನ ಅನುಭವಗಳ ಮೂಲಕ ಲೇಖಕರು ಇಲ್ಲಿ ಸಾದರ ಪಡಿಸಿದ್ದಾರೆ.

**ಅನುವಾದಗಳು:**

ತೇಜಸ್ವಿ ಒಬ್ಬ ಉತ್ತಮ ಅನುವಾದಕರೂ ಆಗಿದ್ದರು ಎನ್ನುವುದಕ್ಕೆ ಅವರು ಅನುವಾದಿಸಿರುವ ಕೃತಿಗಳೇ ಸಾಕ್ಷ್ಯ ನುಡಿಯುತ್ತವೆ. ತೇಜಸ್ವಿಗೆ ಕಾಡು–ಮೇಡು ಹಾಗೂ ಸಾಹಸಯಾತ್ರೆಗಲ್ಲಿ ಹೆಚ್ಚಿನ ಒಲವಿದ್ದರಿಂದ ತಮ್ಮ ಆಸಕ್ತಿಯ ವಲಯದಲ್ಲೇ ಇರುವ ಕೃತಿಗಳನ್ನು ಕನ್ನಡಕ್ಕೆ ತಂದರು. ಇವು ಕೇವಲ ಭಾಷಾನುವಾದವಾಗಿರದೆ ಭಾವಾನುವಾದವಾಗಿವೆ. ಅಂದರೆ ಇಂಗ್ಲೀಷಿನ ಸಾರವನ್ನು ಕನ್ನಡ ಸಂಸ್ಕೃತಿಯ ನೆರಳಲ್ಲಿ ಕನ್ನಡ ಭಾಷೆಯ ಮೂಲಕ ತೇಜಸ್ವಿ ಮರುಸೃಷ್ಟಿಸಿದ್ದಾರೆ. ಕೆನೆತ್ ಆಂಡರ್‌ಸನ್ ಮತ್ತು ಜಿಮ್‌ಕಾರ್ಬೆಟ್ ಎಂಬ ಮಹಾನ್ ಬೇಟೆಗಾರರ ಬೇಟೆಯ ಮೈನವಿರೇಳಿಸುವ ಬೆಚ್ಚನೆಯ

ಅನುಭವಗಳನ್ನು ಕನ್ನಡಿಗರಿಗೆ ತೇಜಸ್ವಿ ಹಲವು ಕಂತುಗಳಲ್ಲಿ ದೊರಕಿಸಿಕೊಟ್ಟಿದ್ದಾರೆ. ತೇಜಸ್ವಿ ಸ್ವತಃ ಬೇಟೆಗಾರರೂ ಆಗಿದ್ದರಿಂದ ಆಂಡರ್‌ಸನ್ ಮತ್ತು ಕಾರ್ಬೆಟ್‌ರ ಅನುಭವಗಳು ತೇಜಸ್ವಿಯವರಲ್ಲಿ ಮತ್ತೊಂದು ನೆಲೆಯಲ್ಲಿ ಮರುಹುಟ್ಟು ಪಡೆದಿವೆ. ಲೋಹಿಯಾ ಬರಹಗಳ ಅನುವಾದವೂ ಈ ಪಟ್ಟಿಗೆ ಸೇರುತ್ತದೆ.

**ಕಾಡಿನ ಕಥೆಗಳು ಭಾಗ-೧(೧೯೯೩):** ಇಂಗ್ಲೀಷ್ ಬೇಟೆಗಾರ ಕೆನೆತ್ ಆಂಡರ್‌ಸನ್ ಬೇಟೆಯ ಅನುಭವಗಳ ರೂಪಾಂತರದ ಮೊದಲ ಭಾಗ. ಬೆಳ್ಳಂದೂರಿನ ನರಭಕ್ಷಕ. ಷೇರ್‌ಖಾನ್, ವೈನಾಡಿನ ನರಭಕ್ಷಕ ಎಂಬ ಶೀರ್ಷಿಕೆಗಳಡಿ ಒಟ್ಟು ಹತ್ತು ಕಥೆಗಳು ಇಲ್ಲಿವೆ. ಮೂಲ ಲೇಖಕ ಆಂಡರ್‌ಸನ್ ಮತ್ತು ಅನುವಾದಕ ತೇಜಸ್ವಿ ಅವರ ಸಂದಿಗ್ಧ ಸ್ಥಿತಿಯಲ್ಲಿ ಈ ಕಥೆಗಳು ಮೈದಳೆದಿವೆ.

**ಕಾಡಿನ ಕಥೆಗಳು ಭಾಗ-೨(೧೯೯೩):** ಕೆನೆತ್ ಆಂಡರ್‌ಸನ್ ಅನುಭವಗಳ ರೂಪಾಂತರದ ಎರಡನೇ ಭಾಗವಿದು. ಪೆದ್ದಚೆರುವಿನ ರಾಕ್ಷಸ, ತಾಳವಾಡಿಯ ಮೂಕ ರಾಕ್ಷಸ. ಲಕ್ಕವಳ್ಳಿಯ ಹೆಬ್ಬುಲಿ, ಎಂಬ ಮೂರು ಶೀರ್ಷಿಕೆಗಳಡಿ ಇಲ್ಲಿ ಒಂಭತ್ತ ಕಥೆಗಳಿವೆ. ಈ ಕೃತಿಗೆ ೧೯೮೪ರ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಲಭಿಸಿದೆ.

**ಕಾಡಿನ ಕಥೆಗಳು ಭಾಗ-೩(೧೯೯೪):** ಕೆನೆತ್ ಆಂಡರ್‌ಸನ್ ಅನುಭವಗಳ ರೂಪಾಂತರದ ಮೂರನೇ ಭಾಗ. ದಿಗುವ ಮೆಟ್ಟಿದ ಕೊಲೆಗಡುಕ, ಮಂಚಿಹಳ್ಳಿಯ ಮುಗ್ಧರು, ಭಯಾನಕ ಮಮ್ಮಟವಾಯನ್, ಜಾಲಹಳ್ಳಿಯ ಕುರ್ಕ ಎಂಬ ಶೀರ್ಷಿಕೆಗಳಲ್ಲಿ ಇಲ್ಲಿ ಒಂಭತ್ತು ಕಥೆಗಳಿವೆ.

**ಕಾಡಿನ ಕಥೆಗಳು ಭಾಗ-೪(೧೯೯೪):** ಕೆನೆತ್ ಆಂಡರ್‌ಸನ್ ಅನುಭವಗಳ ಸಂಗ್ರಹ ರೂಪಾಂತರದ ನಾಲ್ಕನೇ ಭಾಗ.

**ರುದ್ರ ಪ್ರಯಾಗದ ಭಯಾನಕ ನರಭಕ್ಷಕ(೧೯೯೫):** ಇದು ಹೆಸರಾಂತ ಇಂಗ್ಲೀಷ್ ಬೇಟೆಗಾರ ಜಿಮ್‌ಕಾರ್ಬೆಟ್‌ನ 'ಮ್ಯಾನ್ ಈಟಿಂಗ್ ಲಿಯೋಪಾರ್ಡ್ ಆಫ್ ರುದ್ರಪ್ರಯಾಗ್' ಪುಸ್ತಕದ ಭಾವಾನುವಾದ. ಭಾರತದಲ್ಲಿ ಬೆಳೆದ ಜಿಮ್‌ಕಾರ್ಬೆಟ್ ತಾನು ಪ್ರಯಾಗದಲ್ಲಿ ನಡೆಸಿದ ಸಾಹಸಗಳನ್ನು ಹಾಗೂ ಘರ್ನಾಲ್ ರೈತರೊಂದಿಗಿನ ತನ್ನ ಬೇಟೆಯ ಅನುಭವಗಳನ್ನು ಸಹಜವಾಗಿ ತನ್ನ ಕೃತಿಯಲ್ಲಿ ನಿರೂಪಿಸಿದ್ದಾನೆ. ತೇಜಸ್ವಿ ಇಲ್ಲಿ ಅಷ್ಟೇ ಸಹಜವಾಗಿ ಮತ್ತು ಜೀವಂತವಾಗಿ ಕನ್ನಡಕ್ಕೆ ತಂದಿದ್ದಾರೆ.

**ಲೋಹಿಯಾ:** ರೈತ ಸಂಘದ ಅಧ್ಯಕ್ಷ ಪ್ರೊ.ನಂಜುಂಡಸ್ವಾಮಿ ಅವರೊಡನೆ ತೇಜಸ್ವಿ ಅವರು ಕನ್ನಡಕ್ಕೆ ತಂದ ಅನುವಾದ ಗ್ರಂಥವಿದು. ಇಲ್ಲಿ ರಾಮಮನೋಹರ ಲೋಹಿಯಾರ ಕೆಲವು ಆಯ್ದ ಬರಹಗಳಿವೆ. ಕನ್ನಡಗರಿಗೆ ಲೋಹಿಯಾ ವಿಚಾರಗಳು ಮೊದಲಿಗೆ ಪರಿಚಯವಾದದ್ದೇ ಈ ಪುಸ್ತಕದ ಮೂಲಕ. ಲೋಹಿಯಾರ ವಿಚಾರಧಾರೆಗಳನ್ನು ಪ್ರತಿನಿಧಿಸುವ ಕೆಲವು ಬರಹಗಳನ್ನು ತೇಜಸ್ವಿ ಇಲ್ಲಿ ಅನುವಾದಿಸಿದ್ದಾರೆ. ಇದಕ್ಕೆ ಕುವೆಂಪು ಮುನ್ನುಡಿ ಬರೆದಿದ್ದಾರೆ.

**ಸಂಶೋಧನಾತ್ಮಕ ವೈಜ್ಞಾನಿಕ ಬರವಣಿಗೆ:**

ತಮ್ಮ ಆಳವಾದ ಓದಿನ ಮೂಲಕ ತೇಜಸ್ವಿ ಕಂಡುಕೊಂಡ ಜ್ಞಾನವನ್ನು ಇಲ್ಲಿ ಅಭಿವ್ಯಕ್ತಿಸಿದ್ದಾರೆ. ಇವು ಯಾವುದೋ ಒಂದು ಇಂಗ್ಲೀಷ್ ಕೃತಿಯಲ್ಲಿರುವ ವಿಚಾರಗಳ ಅನುವಾದವಲ್ಲ. ಬದಲಿಗೆ ಹಲವು ಕೃತಿಗಳ ಶೋಧದಿಂದ ಒಡಮೂಡಿದ ಕೃತಿಗಳು. ತೇಜಸ್ವಿ ತಮ್ಮ ಮಟ್ಟಿಗೆ ಶೋಧಿಸಿ, ವಿಶ್ಲೇಷಿಸಿ ಬರೆದಿರುವ ವೈಜ್ಞಾನಿಕ ಬರವಣಿಗೆಗಳು. ಹಾಗಾಗಿಯೇ ಇವು ಸಂಶೋಧನಾತ್ಮಕ ವೈಜ್ಞಾನಿಕ ಬರವಣಿಗೆಗಳು. ಇಲ್ಲಿ ಪರಿಸರದ ಭೌಗೋಳಿಕ ವಿವರಗಳು ಹಾಗೂ ಪ್ರಾಕೃತಿಕ ವಿಸ್ಮಯಗಳು ಮತ್ತು ಹಾರುವ ತಟ್ಟೆಗಳ ಕುರಿತು ವೈಜ್ಞಾನಿಕವಾಗಿ ವಿವರಿಸಿದ್ದಾರೆ. ಕನ್ನಡಕ್ಕಂತೂ ಇದು ಹೊಚ್ಚ ಹೊಸ ಜ್ಞಾನ.

**ಫ್ಲೈಯಿಂಗ್ ಸಾಸರ್ಸ್ ಭಾಗ–೧(೧೯೯೩):** ಇದು ಹಾರುವ ತಟ್ಟೆಗಳ ರೋಚಕ ಸುದ್ದಿಗಳನ್ನು ವಿಶ್ಲೇಷಣಾತ್ಮಕವಾಗಿ ಹೇಳುವ ವೈಜ್ಞಾನಿಕ ಬರವಣಿಗೆ. ಹಾರುವ ತಟ್ಟೆಗಳು ಕೆಲವು ವರ್ಷಗಳ ಹಿಂದೆ ವಿಶ್ವದಾದ್ಯಂತ ಭಾರೀ ಕುತೂಹಲ–ಚರ್ಚೆಗೆ ಕಾರಣವಾಗಿದ್ದವು. ಬಾಹ್ಯಲೋಕದ ಜೀವಿಗಳೇ(E.T=Extra Terrestrial) ಹಾರುವ ತಟ್ಟೆಗಳು ಎಂಬ ನಂಬಿಕೆ ವಿಜ್ಞಾನ ಲೋಕದಲ್ಲಿ ಚಾಲ್ತಿಯಲ್ಲಿದೆಯಾದರೂ ಅದಿನ್ನೂ ದೃಢಪಟ್ಟಿಲ್ಲ. 'Extra terrastrial' ಕುರಿತಾದ ಚರ್ಚೆಗೆ ಹಾರುವ ತಟ್ಟೆಗಳು ಇಂದಿಗೂ ಮುಖ್ಯ ಆಕರಗಳು. ಆಕಾಶದಲ್ಲಿ ತಟ್ಟೆಯಾಕಾರದಲ್ಲಿ ಕಾಣಿಸಿಕೊಂಡು ಕ್ಷಣಾರ್ಧದಲ್ಲಿ ಇವು ಮರೆಯಾಗಬಲ್ಲವು ಎಂಬುದು ಕಂಡವರ ಹೇಳಿಕೆ. ಒಟ್ಟಾರೆ ಹಾರುವ ತಟ್ಟೆಗಳ ಕುರಿತು ಇರುವ ನಂಬಿಕೆ, ಕುತೂಹಲ ಹಾಗೂ ಸಂಶೋಧನೆಗಳನ್ನು ಈ ಕೃತಿ ಮಂಡಿಸುತ್ತದೆ. ಮೊದಲ ದರ್ಜೆಯ ಮುಖಾಮುಖಿ ಮತ್ತು ಎರಡನೆ ದರ್ಜೆಯ ಮುಖಾಮುಖಿ ಎಂದು ಹದಿಮೂರು ಅಧ್ಯಾಯಗಳಲ್ಲಿ ಆ ಕುರಿತ ಘಟನಾವಳಿಗಳನ್ನು, ಸಂಶೋಧನೆಗಳನ್ನು ನಿರೂಪಿಸುತ್ತದೆ. ಖಗೋಳಶಾಸ್ತ್ರಜ್ಞರ ಅನ್ವೇಷಣೆಗಳು ಮತ್ತು ದಾಖಲೆಗಳ ಜೊತೆಯಲ್ಲಿಯೇ ಕಾಲ್ಪನಿಕ ಜಗತ್ತಿನ ಊಹೆಗಳಲ್ಲಿ ಫ್ಲೈಯಿಂಗ್ ಸಾಸರ್‌ಗಳು ಎಬ್ಬಿಸಿರುವ ಕುತೂಹಲಗಳನ್ನು ಚಿತ್ರಗಳ ಸಮೇತ ಈ ಕೃತಿ ಮುಂದಿಡುತ್ತದೆ.

**ಫ್ಲೈಯಿಂಗ್ ಸಾಸರ್ಸ್ ಭಾಗ–೨(೧೯೯೩):** ಫ್ಲೈಯಿಂಗ್ ಸಾಸರ್ಸ್‌ನ ಎರಡನೆಯ ಭಾಗವಿದು. ಈ ಭಾಗವು ಹಾರುವ ತಟ್ಟೆಗಳ ಮೂರನೆ ದರ್ಜೆಯ ಮುಖಾಮುಖಿಯನ್ನು ಹೇಳುತ್ತದೆ. ಇಟಲಿಯಲ್ಲಿ ಹೊರಲೋಕದ ಜೀವಿಗಳು. ಜಗತ್ತಿನ ನಾನಾ ಕಡೆಗಳಲ್ಲಿ ಆಕಾಶ ಕುಬ್ಜರು, ಪರಲೋಕದ ಪ್ರೇಯಸಿದೊಂದಿಗೆ, ವಿಲ್ಲಾಸ್ ಬೋಸನ ಹನಿಮೂನ್, ಕಳೆದುಹೋದ ಕಾಲ, ಆಡಮ್ ಸ್ಕ್ರೀ ಮತ್ತು ಗಗನ ಯಾತ್ರಿ–ಹೀಗೆ ಖಚಿತವಲ್ಲದ ಆದರೆ ನಂಬಬೇಕಾದ ಅದ್ಭುತ ಜಗತ್ತನ್ನು ಅವುಗಳ ಬಗೆಗೆ ನಡೆದ ಸಂಶೋಧನೆ, ಚರ್ಚೆ, ವಾದ–ವಿವಾದಗಳೊಂದಿಗೆ ನಿರೂಪಿಸುತ್ತದೆ. ತೇಜಸ್ವಿ ಜಗತ್ತಿನ ದೊಡ್ಡ ಕೌತುಕವನ್ನು ಈ ಕೃತಿಗಳ ಮೂಲಕ ಕನ್ನಡಿಗರಿಗೆ ಪರಿಚಯಿಸಿದ್ದಾರೆ.

**ಮಿಸ್ಸಿಂಗ್ ಲಿಂಕ್(೧೯೯೧):** ಇದು ಮಾನವಶಾಸ್ತ್ರವನ್ನು ವಸ್ತುವಾಗುಳ್ಳ ಕೃತಿ. ಸುಮಾರು ಹದಿನೆಂಟು ಅಧ್ಯಾಯಗಳಲ್ಲಿ ನಿರೂಪಿತವಾಗುತ್ತದೆ. ಮಾನವನ ವಿಕಾಸದ ವಿವಿಧ ಹೆಜ್ಜೆಗಳನ್ನು ಪತ್ತೇದಾರಿ ಕಾದಂಬರಿಯ ಹಾಗೆ ಗುರುತಿಸುವ ಈ ಮಿಸ್ಸಿಂಗ್ ಲಿಂಕ್ ಹೆಸರೇ ಹೇಳುವಂತೆ ಸರಪಳಿಯ

ಕಳೆದುಹೋದ ಕೊಂಡಿಗಳ ಹುಡುಕಾಟ. ಈ ನಿಟ್ಟಿನಲ್ಲಿ ಕ್ಯಾಂಪ್‌ಬೆಲ್ ಬರ್ನಾಷ್, ಚಾರ್ಲ್ಸ್ ಡಾರ್ವಿನ್, ಲೂಯಿಸ್ ಲೀಕಿ, ಗೂಡಾಲ್‌ಜೇನ್‌ರಂಥ ಜೀವ ವಿಜ್ಞಾನಿಗಳ ವಿಚಾರಗಳನ್ನು ಈ ಕೃತಿ ಬಳಸಿಕೊಂಡಿದೆ. ಈ ಕೃತಿಗೆ ೧೯೯೪ರ ಶಿವರಾಮಕಾರಂತ ಪ್ರಶಸ್ತಿ ದೊರೆತಿದೆ.

**ವಿಸ್ಮಯ ಮಾಲಿಕೆ:**

ಪ್ರದೀಪ ಕೆಂಜಿಗೆಯವರೊಂದಿಗೆ ಸೇರಿ ರಚಿಸಿರುವ ಈ ಮಾಲಿಕೆಯಲ್ಲಿ ಮೂರು ಭಾಗಗಳಿವೆ. ಪರಿಸರ ವಿಜ್ಞಾನದ ಅಮೂರ್ತ ಕಲ್ಪನೆಗಳನ್ನು ಸಾಮಾನ್ಯ ಜನರಿಗೂ ಸುಲಭವಾಗಿ ಅರ್ಥವಾಗುವಂತೆ ಈ ಮಾಲಿಕೆಯಲ್ಲಿ ತೇಜಸ್ವಿ ನಿರೂಪಿಸಿದ್ದಾರೆ.

**ವಿಸ್ಮಯ ಭಾಗ೧(೧೯೯೪):** ಈ ಭಾಗದಲ್ಲಿ ಬ್ರಹ್ಮಾಂಡದ ಹಿನ್ನೆಲೆಯಲ್ಲಿ ಪರಿಸರ, ಜೀವಸ್ತರದ ಅನಂತ ವೈವಿಧ್ಯಗಳು, ಸೌರಶಕ್ತಿಯ ವಿಶ್ವರೂಪ ಎಂಬ ಮೂರು ಉಪ ವಿಭಾಗಗಳಿವೆ. ಬ್ರಹ್ಮಾಂಡದ ಹುಟ್ಟು ಮತ್ತು ಸಾವು, ಭೂಮಿಯ ವಯಸ್ಸು, ಸಸ್ಯ ಮತ್ತು ಪ್ರಾಣಿಗಳ ಉದ್ಭವ, ಪರಿಸರ ಪ್ರತಿರೋಧ, ಪರಿಸರವು ನಿರಂತರ ಹೊಂದಾಣಿಕೆಯೇ? ಎಂದೆಲ್ಲಾ ಚರ್ಚಿಸಿ ವಿಶ್ಲೇಷಿಸಿರುವುದರ ಮೂಲಕ ಪರಿಸರ ವಿಜ್ಞಾನದ ಮೂಲತತ್ವಗಳನ್ನು ಹಂತ ಹಂತವಾಗಿ ಅರಿವಿಗೆ ತರುತ್ತದೆ ಈ ಕೃತಿ.

**ವಿಸ್ಮಯ ಭಾಗ೨(೧೯೯೬):** ಈ ಭಾಗದಲ್ಲಿ ಮಹೋರಗಗಳ(ಡೈನೋಸಾರಸ್) ಅಂತರ್ಧಾನ, ಸೈಬೀರಿಯಾದ ಪ್ರಚಂಡ ಆಸ್ಫೋಟನೆ, ಜನಸಂಖ್ಯೆ ಮತ್ತು ಪರಿಸರ, ವಿಪ್ಪತ್ಕಾರಕ ವಿಷಗಳು, ಜಲಸಂಪತ್ತಿನ ಸಮಾಧಿ. ಆಪತ್ತಿನ ಅಂಚಿನಲ್ಲಿ ಅಲಾಸ್ಕಾ, ಲೇಕ್ ಯೋಸ್‌ನ ಪೆಡಂಭೂತ, ಧರೆಯ ರಕ್ಷಾಕವಚದ ಕಥೆ, ವಿಕಿರಣದ ಸಾಗರದಲ್ಲಿ, ಒತ್ತೆಯಾಳಾಗಿ ಪರಿಸರ-ಹೀಗೆ ಹದಿನೇಳು ಬರಹಗಳಿವೆ. ವಿಕಾಸದ ವಿವಿಧ ಹಂತಗಳಲ್ಲಿ ಕೈಗಾರಿಕೀಕರಣ ಮತ್ತು ಆಧುನಿಕ ತಂತ್ರಜ್ಞಾನದಂಥ ನಿರ್ಣಾಯಕ ಘಟ್ಟಗಳಲ್ಲಿ ಪರಿಸರವು ಹೇಗೆ ಪ್ರಭಾವಿಸಿದೆ ಮತ್ತು ದುರಂತಕ್ಕೀಡಾಗುತ್ತಿದೆ ಎಂಬ ಸತ್ಯಸಂಗತಿಗಳ ವಿವರ ಮತ್ತು ವಿಶ್ಲೇಷಣೆ ಇಲ್ಲಿದೆ.

**ವಿಸ್ಮಯ ಭಾಗ(೧೯೯೪):** ಇದು ವಿಸ್ಮಯ ಮಾಲಿಕೆಯ ಕೊನೆಯ ಪುಸ್ತಕ. ಸುಮಾರು ೨೦ ಬರಹಗಳು ಈ ಭಾಗದಲ್ಲಿವೆ. ಅವಸಾನಗೊಂಡ ಜೀವಸಂಕುಲಗಳು ಮತ್ತು ಅವುಗಳ ಪುನರಾಭಿವೃದ್ಧಿಯ ವಿಚಾರಗಳು. ಅಗ್ನಿಪರ್ವತ, ಚಂಡಮಾರುತ, ಟಾರ್ನೆಡೋ ಮತ್ತು ಸಿಡಿಲಿನಂಥ ಭಯಂಕರ ಪ್ರಾಕೃತಿಕ ಶಕ್ತಿಗಳ ಪರಿಚಯಾತ್ಮಕ ಕಥನಗಳು ಈ ಪುಸ್ತಕದಲ್ಲಿವೆ. ಮನುಷ್ಯ ಮತ್ತು ಪರಿಸರ ಸಂಬಂಧಗಳನ್ನು ಸರಿದೂಗಿಸಿಕೊಂಡು ಹೋಗುವ ಮಾರ್ಗೋಪಾಯಗಳನ್ನು ಈ ಪುಸ್ತಕ ಸೂಚಿಸುತ್ತದೆ.

**ಮಿಲೇನಿಯಂ ಸರಣಿ:**

ಇದು ಸಹಸ್ರಾರು ವರ್ಷಗಳ ಹಲವು ವಿದ್ಯಮಾನಗಳನ್ನು ಕುರಿತ ಪುಸ್ತಕ ಮಾಲೆ. ಭೂಮಿಯ ಪದರಗಳಡಿ ಎಂದೋ ಹುದುಗಿಹೋಗಿದ್ದ ಪ್ರಾಚೀನ ನಾಗರೀಕತೆಗಳು, ಅವಸಾನದ ಅಂಚಿನಲ್ಲಿದ್ದು ಇಂದಿಗೂ ದಿಟ್ಟತನದಿಂದ ಬದುಕುತ್ತಿರುವ ಮತ್ತು ನಾಗರೀಕತೆಯ ಪ್ರವಾಹದಲ್ಲಿ ಕೊಚ್ಚಿಹೋಗುತ್ತಿರುವ ಬುಡಕಟ್ಟು ಜನಾಂಗಗಳು, ಬಿಡಿಸಲಾರದ ಪವಾಡಸದೃಶ ಘಟನೆಗಳು, ಭಯಾನಕ ಸಾಗರಗಳು, ದ್ವೀಪಗಳು, ಅಗ್ನಿಪರ್ವತಗಳು, ಟಾರ್ನೆಡೋಗಳು(ಭೀಕರ ಸುಂಟರಗಾಳಿಗಳು), ಕ್ಷಾಮ-ಪ್ರವಾಹಗಳು ಇವೆಲ್ಲವುಗಳ ನಡುವೆಯೇ ಒಂದು ಕಾಲಕ್ಕೆ ಇದ್ದ ಈಗಲೂ ಇರುವ ವಿವಿಧ ಜೀವಸಂಕುಲಗಳು, ಕಾಲಪ್ರಾವಹಕ್ಕೆ ಅವು ಹೊಂದಿಕೊಂಡ ಬಗೆ, ಮಹಾಯುದ್ಧಗಳು ಮತ್ತು ಅವುಗಳ ಪರಿಣಾಮ, ತೃತೀಯ ರಾಷ್ಟ್ರಗಳ ಮತ್ತು ಅವುಗಳ ಮೇಲೆ ಪ್ರಭಲರಾಷ್ಟ್ರಗಳ ದಬ್ಬಾಳಿಕೆ, ಇವೆಲ್ಲವುಗಳನ್ನೂ ಹೇಳುವ ಮಿಲೇನಿಯಂ ಸರಣಿ ಚರಿತ್ರೆ, ಸಾಹಿತ್ಯ, ವೈಜ್ಞಾನಿಕ ಸಂಶೋಧನೆಗಳ ಮೊತ್ತ. ಈ ಸರಣಿಯಲ್ಲಿ ಒಟ್ಟು ಹದಿನಾರು ಪುಸ್ತಕಗಳು ಪ್ರಕಟವಾಗಿವೆ. ತೇಜಸ್ವಿ ಬದುಕಿದ್ದರೆ ಈ ಸರಣಿಗೆ ಮತ್ತಷ್ಟು ಕೃತಿಗಳು ಸೇರ್ಪಡೆಗೊಳ್ಳುತ್ತಿದ್ದವೇನೋ.

**ಹುಡುಕಾಟ(ಮಿಲೇನಿಯಂ-೧):** ಇದು ಲ್ಯಾಟಿನ್ ಅಮೆರಿಕದ ಪ್ರಾಚೀನತೆ ಮತ್ತು ಭೌಗೋಳಿಕ ವೈವಿಧ್ಯವನ್ನು ಪರಿಚಯಿಸುವ ಪುಸ್ತಕ. ಅಲ್ಲಿರುವ ಪ್ರಪಂಚದಲ್ಲೇ ಅತಿ ಎತ್ತರದ ಏಂಜಲ್ಸ್ ಫಾಲ್ಸ್, ಟೆಪೋ ಶಿಖರಗಳು, ಪಿರಮಿಡ್ಡುಗಳು, ಗುಹಾನಗರಗಳು, ಮತ್ತು ದೈತ್ಯ ಪ್ರತಿಮೆಗಳನ್ನು ಕುರಿತ ಟಿಪ್ಪಣಿಗಳು ಈ ಪುಸ್ತಕದಲ್ಲಿವೆ. ಒಂದು ಕಾಲಕ್ಕೆ ಆಂಡಿಸ್ ಪರ್ವತಗಳ ಸಾಲಿನಲ್ಲಿದ್ದ ಮಾಯಾ ಮತ್ತು ಇಂಕಾ ನಾಗರೀಕತೆಗಳು ಹಾಗೂ ಪ್ಯಾಬ್ಲೋ ನೆರೂಡ ತನ್ನ ಕಾವ್ಯದಲ್ಲಿ ಹೇಳುವ ಮಚುಪಿಚು ಶಿಖರಗಳ ಪುರಾತನ ಸಂಸ್ಕೃತಿಗಳನ್ನು ಪರಿಚಿಸುವ ಈ ಪುಸ್ತಕ, ಸ್ಪೈನ್ ಆಕ್ರಮಣದಿಂದ ಲ್ಯಾಟಿನ್ ಅಮೆರಿಕದ ಪ್ರಾಚೀನ ನಾಗರಿಕತೆಗಳು ಹೇಗೆ ಬೆಳಕಿಗೆ ಬಂದವೆನ್ನುವುದನ್ನು ಹೇಳುತ್ತದೆ. ಹಾಗೆಯೇ ಲ್ಯಾಟಿನ್ ಅಮೆರಿಕ ಸ್ಪೇನಿನ ವಸಾಹತುವಾಗಿ ಮಾರ್ಪಟ್ಟ ದುರಂತವನ್ನೂ ಹೇಳುತ್ತದೆ.

**ಜೀವನ ಸಂಗ್ರಾಮ(ಮಿಲೇನಿಯಂ-೨):** ಅಗ್ನಿಪರ್ವತ ಮತ್ತು ಜ್ವಾಲಾಮುಖಿ ಸ್ಫೋಟಗಳು, ಭೂಕಂಪಗಳು ಮತ್ತು ಅವುಗಳ ಪರಿಣಾಮ, ಸಾಗರಗಳಿಂದ ನುಗ್ಗಿಬರುವ ದೈತ್ಯಾಕಾರದ ಟೈಡಲ್ ಅಲೆಗಳು(ತ್ಸುನಾಮಿ), ಭೀಕರ ಸುಂಟರಗಾಳಿ(ಟಾರ್ನೆಡೋ), ಕಾಳ್ಗಿಚ್ಚು(ಎಲ್‌ನಿನೋ)-ಮುಂತಾದ ಪ್ರಾಕೃತಿಕ ಶಕ್ತಿಗಳ ಸ್ವರೂಪವನ್ನು ಚಾರಿತ್ರಿಕ ಘಟನೆಗಳ ಮೂಲಕ ಈ ಪುಸ್ತಕ ಪರಿಚಯಿಸುವುದರ ಜೊತೆಗೆ ವಿನಾಶಕಾರಿ ಶಕ್ತಿಗಳ ನಡುವಿನ ಬದುಕನ್ನು ಚಿತ್ರಿಸುತ್ತದೆ.

**ಫೆಸಿಫಿಕ್ ದ್ವೀಪಗಳು(ಮಿಲೇನಿಯಂ-೩):** ಇದು ಪೆಸಿಫಿಕ್ ರಾಷ್ಟ್ರಗಳ ವೈವಿಧ್ಯಮಯ ಬದುಕನ್ನು ಚಿತ್ರಿಸುವ ಪುಸ್ತಕ. ನರಭಕ್ಷಕರಾಗಿದ್ದ ಫಿಜಿಯನ್ನರು ಮತ್ತು ಸಾವಿರಾರು ಮೈಲು ಪ್ರಯಾಣಿಸುವ ಸಾಹಸಿ ನಾವಿಕರೆನಿಸಿದ್ದ ಪಾಲಿನೇಷ್ಯರಂಥ ಬುಡಕಟ್ಟು ಜನಾಂಗಗಳು ಪೆಸಿಫಿಕ್ ಸಾಗರದ ವಿಶಾಲ ಜಲರಾಶಿಯಲ್ಲಿ ಅಪಿರಳವಾಗಿ ಹರಡಿಕೊಂಡಿರುವ ದ್ವೀಪಗಳಲ್ಲಿ ಬದುಕುತ್ತಿದ್ದವು. ನಾಗರಿಕ ಪ್ರಪಂಚದ ಸ್ಪರ್ಶವೇ ಇಲ್ಲದಿದ್ದ ಈ ಸುಂದರ ದ್ವೀಪಗಳು ಪಾಶ್ಚಾತ್ಯರು ಹೆಜ್ಜೆಯಿಟ್ಟಂತೆ

ಕಲುಷಿತಗೊಂಡವು. ಕ್ರೈಸ್ತಧರ್ಮ ಮತ್ತು ಆಧುನೀಕರಣದ ತುಳಿತಕ್ಕೆ ಸಿಕ್ಕ, ಅಲ್ಲಿನ ಮೂಲನಿವಾಸಿಗಳ ಬದುಕು ಅಸ್ತವ್ಯಸ್ತವಾಯಿತು. ಮಹಾಯುದ್ಧಗಳ ಕಾಲದಲ್ಲಿ ಈ ದ್ವೀಪಗಳು ಇಬ್ಬಗೆಯ ಸೇನೆಗಳ ಸಮರ ವೇದಿಕೆಯಾಗಿದ್ದಲ್ಲದೆ ಆನಂತರದಲ್ಲೂ ಇಲ್ಲಿ ಪರಮಾಣು ಸ್ಫೋಟ ಪ್ರಯೋಗಗಳು ನಡೆದವು. ಈ ಪುಸ್ತಕದ ಒಟ್ಟು ಉದ್ದೇಶ ಇದನ್ನು ಮನದಟ್ಟು ಮಾಡುವುದೇ ಆಗಿದೆ. ಪುಸ್ತಕದ ಕೊನೆಯಲ್ಲಿರುವ ರೈಟೀಯಾ ಎಂಬ ಕಿರುಕಾದಂಬರಿ ಪೆಸಿಫಿಕ್ ದ್ವೀಪಗಳ ದುತಂತದ ಸ್ವರೂಪಗಳನ್ನು ಸೂಕ್ಷ್ಮವಾಗಿ ದಾಖಲಿಸುತ್ತದೆ.

**ಚಂದ್ರಚೂರು(ಮಿಲೇನಿಯಂ-೪):** ಮನುಷ್ಯ ಚಂದ್ರಲೊಕ ಹೊಕ್ಕ ಕಥೆಯನ್ನು ಈ ಪುಸ್ತಕ ಹೇಳುತ್ತದೆ. ೨೦ನೇ ಶತಮಾನದಲ್ಲಿ ಖಗೋಳ ವಿಜ್ಞಾನಿಗಳು ನಡೆಸಿದ ಬಾಹ್ಯಾಕಾಶ ಪಯಣಗಳನ್ನೂ, ಅವುಗಳ ಸಾಧಕ ಬಾಧಕಗಳನ್ನೂ ಸ್ಥೂಲವಾಗಿ ಪರಿಚಯಿಸುವ ಈ ಪುಸ್ತಕ ನಮ್ಮ ಕಲ್ಪನೆಯನ್ನು ಮೀರಿದ ಚಂದ್ರನ ಅಪರಿಚಿತ ಪ್ರಪಂಚವನ್ನು ತೋರಿಸುತ್ತದೆ.

**ನೆರೆಹೊರೆಯ ಗೆಳೆಯರು(ಮಿಲೇನಿಯಂ-೫):** ವಿಶ್ವದ ಅನೇಕ ದ್ವೀಪಗಳಲ್ಲಿ ಬಹುತೇಕ ಪೆಸಿಫಿಕ್ ಸಾಗರದ ದ್ವೀಪಗಳಲ್ಲಿ ವಾಸಿಸುವ ಏಡಿ, ಆಮೆ, ಕಪ್ಪೆ, ಇರುವೆ, ಅಳಿಲು, ಇಲಿ ಮುಂತಾದ ಜೀವ ಸಂಕುಲಗಳ ಪರಿಚಯ ಇಲ್ಲಿದೆ. ಇಲ್ಲಿಯ ನಿರೂಪಣೆ ರೋಚಕವಾಗಿದೆ. ಪ್ರಖ್ಯಾತ ಪ್ರಾಣಿ ತಜ್ಞ, ಅನ್ವೇಷಕ, ಲೇಖಕ ಜೆರಾಲ್ಡ್ ಡುರೇಲ್ ಆಫ್ರಿಕಾದಲ್ಲಿ ಹಾರುವ ಇಲಿಗಳನ್ನು ಹಿಡಿಯಲು ಹೋದ ಅವನ ಕಥಾನಕ "ಬಫೆ ಆಫ್ ಬಿಗಲೇಸ್" ಕೃತಿಯ "ದಿ ಫಾರೆಸ್ಟ್ ಆಫ್ ಫ್ಲೈಯಿಂಗ್ ಮೈಸ್" ಅಧ್ಯಾಯದ ಭಾವಾನುವಾದವೂ ಇಲ್ಲಿದೆ.

**ಮಹಾಯುದ್ಧ-೧(ಮಿಲೆನಿಯಂ ೬):** ಇಪ್ಪತ್ತನೇ ಶತಮಾನದ ನಾಗರೀಕತೆಯ ಮೇಲೆ ಅಪಾರ ಪ್ರಭಾವ ಮತ್ತು ಪರಿಣಾಮ ಬೀರಿದ ಎರಡನೇ ಮಹಾಯುದ್ಧ ಕಾಲದ ಮಾನವೀಯ ಘಟನೆಗಳ ವೃತ್ತಾಂತ ಈ ಕೃತಿಯಲ್ಲಿ ಸಂಕಲಿತವಾಗಿದೆ. ಮಹಾಯುದ್ಧದ ರೂಪುರೇಷೆಗಳು, ಸೈನಿಕರ ಅಸಾಮಾನ್ಯ ಸಾಹಸಗಳು, ತ್ಯಾಗಗಳು, ಯುದ್ಧ ಗೆಲ್ಲಲು ಉಭಯ ಪಕ್ಷಗಳು ಹೂಡುವ ಜಾಲಗಳು, ಸಂಚುಗಳು, ಯುದ್ಧ ಸೃಷ್ಟಿಸುವ ಅನೇಕ ಆಯಾಮಗಳ ಸಂಶ್ಲೇಷಣೆಯಿಂದ ಕೃತಿ ಓದುಗರನ್ನು ಆಕರ್ಷಿಸುತ್ತದೆ.

**ಮಹಾಯುದ್ಧ-೨(ಮಿಲೆನಿಯಂ ೭):** ಮಹಾಯುದ್ಧದ ಘಟನೆಗಳ ಮುಂದುವರೆದ ಭಾಗ ಇದು, ಫ್ರೆಂಚ್ ಸೈನಿಕನೊಬ್ಬ ರಕ್ಷಿಸುವ ಜರ್ಮನ್ ಷೆಫರ್ಡ್ ತಳಿಯ ನಾಯಿ ಅವರ ಪರವಾಗಿ ನಡೆಸುವ ಸಾಹಸಗಳ ಹೃದಯಂಗಮ ಚಿತ್ರಣ ಇಲ್ಲಿದೆ. ಯುದ್ಧ ಹೊತ್ತು ತರುವ ಅಪಹರಣ, ಸಂಚಿನ ಕೊಲೆಗಳು, ಹಿಟ್ಲರನ ಕೊನೆಯ ದಿನಗಳು ಮತ್ತು ಜಪಾನಿನ ಮೇಲೆ ನಡೆದ ಅಣುಬಾಂಬಿನ ಘೋರಧಾಳಿ-ಹೀಗೆ ಯುದ್ಧದ ವಿವಿಧ ಮುಖಗಳನ್ನು ಈ ಕೃತಿ ಒರೆಗೆ ಹಚ್ಚುತ್ತದೆ.

**ಮಹಾಯುದ್ಧ-೩(ಮಿಲೆನಿಯಂ-೮):** ಇದು ಮಹಾಯುದ್ಧ ಸರಣಿಯ ಕೊನೆಯ ಕಂತು. ಈ ಕೃತಿಯಲ್ಲಿ ಜರ್ಮನಿಯ ಗಸ್ಟಪೋಗಳ ಸರ್ವೋನ್ನತ ಅಧಿಕಾರಿಯಾಗಿದ್ದ ಹೆನ್ರಿಚ್ ಹಿಟ್ಲರನಿಗೆ ಚಿಕಿತ್ಸೆ ನೀಡುವ ಡಾ.ಕೆಸ್ಟನನ್ 'ಮಂತ್ರಹಸ್ತ' ಪುಸ್ತಕದ ಭಾವಾನುವಾದವಿದೆ. ಹಿಟ್ಲರನ ಪಾಶವಿ ಕೃತ್ಯಗಳನ್ನು

ದ್ವೇಷಿಸಿದರೂ, ಮಹಾಯುದ್ಧದ ಜ್ವಾಲೆಯಲ್ಲಿ ಮಾನವೀಯತೆ ದಗ್ಧವಾಗುತ್ತಿರುವುದನ್ನು ನೋಡುತ್ತಿದ್ದರೂ ತನ್ನ ಸದ್ಭಾವನೆ, ಸನ್ನಡತೆ, ಸ್ನೇಹದಿಂದ ಮನುಷ್ಯರನ್ನು ಬದುಕಿಸುತ್ತ ಹೋಗುವ ಅಪೂರ್ವ ಮಾನವತಾವಾದಿಯೊಬ್ಬನ ಕಥೆಯಿದು. ಹಾಗೆಯೇ ಯುದ್ಧಾನಂತರದ ಕಾಲದಲ್ಲಿ ಸಂಭವಿಸಿದ ಅನೇಕ ರೋಚಕ ವೃತ್ತಾಂತಗಳಿಂದ ಕೃತಿ ಸಮೃದ್ಧವಾಗಿದೆ.

**ದೇಶ ವಿದೇಶ–೧(ಮಿಲೆನಿಯಂ–೯):** ಪ್ರಾಚೀನ ಕಾಲದ ನಾಗರೀಕತೆಗಳು ವಿಶ್ವದ ವಿವಿಧ ಪ್ರದೇಶಗಳಲ್ಲಿ ಅರಳಿದ ಬಗೆಯನ್ನು, ವಿವರಣೆಗೆ ಸಿಗದ ಹಲವು ದೃಷ್ಟಾಂತಗಳನ್ನು ಈ ಕೃತಿ ಒಳಗೊಂಡಿದೆ. ಕಾಂಬೋಡಿಯಾದ ಅಂಗ್ ಕೋಲ್‌ವಾಟನ್ ಸ್ಮಾರಕಗಳು. ವಿಯಟ್ನಾಂ ರಾಷ್ಟ್ರದ ಸೈಗಾನ್ ನಗರದ ಮನೆಗಳು, ಕಾಂಪೋಚಿಯಾದ ಕೂಟಯುದ್ಧಗಳು, ಪರಮಾಣು ಕಾಲಗಡಿಯಾರದ ಅಚ್ಚರಿಯ ಸಂಗತಿಗಳು, ಪೆರು ದೇಶದ ವೈಭವ. ಓಕ್ ದ್ವೀಪದ ಪ್ರಾಚೀನ ಬಾವಿಗೆ ಸಂಬಂಧಿಸಿದ ಸಾಹಸಗಳು ಇಲ್ಲಿ ರೋಮಾಂಚಕ ಕಥೆಗಳಾಗಿ ವರ್ಣಿತವಾಗಿವೆ.

**ದೇಶ ವಿದೇಶ–೨(ಮಿಲೆನಿಯಂ–೧೦):** ಹಲವಾರು ದೇಶಗಳಲ್ಲಿ ಕಂಡುಬರುವ ಭೌಗೋಳಿಕ ವೈಚಿತ್ರ್ಯಗಳ ಚಿತ್ತಾಕರ್ಷಕ ವರ್ಣನೆ ಇಲ್ಲಿದೆ. ಸಿನಾಯ್‌ನ ಹಾರುವ ಮರಳು, ಫ್ಲೋರಿಡಾದ ಭೀಕರ ಹುದುಲು ಮರಳು, ಅಲ್ಜೀರಿಯಾದ ಅಹ್‌ಗಾರ್‌ಪರ್ವತಗಳು, ಮೊರೊಕ್ಕೋವಿನ ದಾದೇ ಕೊರಕಲು, ಇಥಿಯೋಪಿಯಾದ ಅಸ್ಸಾಲ್ ಸರೋವರ, ಸಹಾರ ಮರುಭೂಮಿ, ಮತ್ತು ಈಜಿಪ್ಟ್‌ನ ಕಳೆದುಹೋದ ಪಿರಮಿಡ್ ವೃತ್ತಾಂತಗಳು ಓದುಗರನ್ನು ಸೂಜಿಗಲ್ಲಿನಂತೆ ಆಕರ್ಷಿಸುತ್ತವೆ

**ದೇಶ ವಿದೇಶ–೩(ಮಿಲೆನಿಯಂ–೧೧):** ಇದು ದಕ್ಷಿಣ ಅಮೆರಿಕದ ಮಹಾನದಿ ಅಮೆಜಾನ್ ಮಹಾರಣ್ಯಗಳು ಮತ್ತು ಅಲ್ಲಿನ ಚಿಂಟಾಲುಗ್ರಾ ಬುಡಕಟ್ಟು ಜನಾಂಗದ ವಿಶಿಷ್ಟ ವಿವರಗಳು, ಸ್ಕಾಟ್‌ಲ್ಯಾಂಡಿನ ಲ್ಯಾಚನೆಸ್ ಸರೊವರದಲ್ಲಿ ಬದುಕಿದ್ದವು ಎನ್ನಬಹುದಾದ ಜುರಾಸಿಕ್ ಯುಗದ ದೈತ್ಯ ಸರೀಸೃಪಗಳ ಅನ್ವೇಷಣೆ. ಹಿಮಾಲಯ ಪರ್ವತ ಮತ್ತು ಅದನ್ನು ಏರಿದ ಸಾಹಸಿಗಳ ಚೈತ್ರಯಾತ್ರೆ ಮತ್ತು ಸಾಹಸ ಕತೆಗಳನ್ನು ಈ ಕೃತಿ ಒಳಗೊಂಡಿದೆ.

**ದೇಶ ವಿದೇಶ–೪(ಮಿಲೆನಿಯಂ–೧೨):** ದೇಶ ವಿದೇಶ ಸರಣಿಯ ಕೊನೆಯ ಕಂತು. ಈ ಕೃತಿ ಆಫ್ರಿಕಾ ಖಂಡದ ಅಚ್ಚರಿಗಳ ಮೇಲೆ ಹೆಚ್ಚು ಕೇಂದ್ರೀಕೃತಗೊಂಡಿದೆ. ಆಫ್ರಿಕಾದ ಸೃಷ್ಟಿ ವೈಚಿತ್ರ್ಯಗಳ ಬಗೆಗಿನ ಇಣುಕುನೋಟ ಇಲ್ಲಿದೆ. ಅಲ್ಲಿನ ಪ್ರಾಕೃತಿಕ ಸಂಪತ್ತು ಕಾಂಗೋ ನದಿಯ ಬಗೆಗಿನ ವಿವರಗಳು, ಮೌಂಟ್ ಹಲೀನ್ ಮಾಯವಾದ ವೃತ್ತಾಂತಗಳು ಚಿತ್ತಾಕರ್ಷಕವಾಗಿ ವರ್ಣನೆಗೊಂಡಿವೆ.

**ವಿಸ್ಮಯ ವಿಶ್ವ–೧(ಮಿಲೆನಿಯಂ–೧೩):** ಕೊಮೊಡೋ ದ್ವೀಪದಲ್ಲಿ ಸಹಸ್ರಾರು ವರ್ಷಗಳಿಂದ ಬದುಕಿ ಬಾಳಿದ ದೈತ್ಯ ಹಲ್ಲಿಯ ವಿವರಗಳು, ರಷ್ಯಾ ಕ್ರಾಂತಿಯ ಸಮಯದಲ್ಲಿ ನಡೆದ ಕಗ್ಗೊಲೆ, ತನ್ನ ಶ್ರೀಮಂತ ನೈಸರ್ಗಿಕ ಸಂಪತ್ತಿನಿಂದಲೇ ದಿವಾಳಿಯಾಗುತ್ತಿರುವ ನೌರು ದ್ವೀಪದ ಕಥೆ. ಶ್ರೀಲಂಕಾದಲ್ಲಿ ಕಡಲಾಮೆಗಳನ್ನು ಸಂರಕ್ಷಿಸುವ ಚಂದ್ರಸ್ಸಿರಿಯ ಸಾಹಸ, ಯಾವುದೇ ಪರೀಕ್ಷೆಯೂ ಬಿಡಿಸಲಾಗದ ಟುರಿನ್ ಶಾಲಿನ ರಹಸ್ಯ–ಹೀಗೆ ಜಗತ್ತಿನ ವಿವಿಧೆಡೆಗಳಲ್ಲಿ ಕಂಡುಬರುವ ಅದ್ಭುತ ಕಥಾನಗಳ ವಿಸ್ಮಯ ಲೋಕ ಇಲ್ಲಿದೆ.

**ಮಹಾಪಲಾಯನ(ಮಿಲೆನಿಯಂ-೧೪):** ಇದು ಪೋಲಿಷ್ ಲೇಖಕ ಸ್ಲಾವೋಮಿರ್ ರಾವಿಸ್ ರಷ್ಯಾದ ಸೈಬೀರಿಯಾ ಶಿಬಿರದಿಂದ ತಪ್ಪಿಸಿಕೊಂಡು ಭಾರತಕ್ಕೆ ಬಂದು ಸೇರುವ ಮಹಾನ್ ಯಾತ್ರೆಯ ಕಥಾನಕ. ಆತ ಬರೆದ 'ದಿ ಲಾಂಗ್ ವಾಕ್' ಪುಸ್ತಕದ ಸಂಕ್ಷಿಪ್ತ ಭಾವಾನುವಾದ ರಾವಿಸ್ ತನ್ನ ಜೊತೆಗಾರರೊಡನೆ ಸೈಬೀರಿಯಾದ ಸೆರೆಯಿಂದ ತಪ್ಪಿಸಿಕೊಂಡು ಕೈಗೊಳ್ಳುವ ಈ ಮಹಾನ್ ಯಾತ್ರೆಯ ರೋಮಾಂಚಕ ಕ್ಷಣಗಳಿಂದ ಈ ಕೃತಿ ತುಂಬಿದೆ.

**ವಿಸ್ಮಯ ವಿಶ್ವ-೨(ಮಿಲೆನಿಯಂ-೧೫):** ಮನುಕುಲವನ್ನು ತಲ್ಲಣಗೊಳಿಸಿದ ಭೀಕರ ಕ್ಷಾಮ, ಸಿಡುಬುರೋಗ ಟೈಟಾನಿಕ್ ಹಡಗಿನ ದುರಂತ ಮತ್ತು ಅನ್ವೇಷಣೆ, ಬ್ರೆಜಿಲ್‌ನ ಕೊಲೆಗಡುಕ ಜೇನುಗಳು, ಇಂಗ್ಲೆಂಡ್‌ನ ಗೋಧಿಯ ಗದ್ದೆಗಳಲ್ಲಿ ಕಾಣಿಸಿಕೊಳ್ಳುವ ನಿಗೂಢ ವೃತ್ತಗಳು-ಹೀಗೆ ಮನಕಲಕುವ ಅಚ್ಚರಿಯ ಮಡುವಿಗೆ ದೂಡುವ ಅಸಾಮಾನ್ಯ ಘಟನೆಗಳ ಸರಮಾಲೆ ಈ ಕೃತಿ.

**ಅಡ್ವೆಂಚರ್(ಮಿಲೆನಿಯಂ-೧೬):** ಮಿಲೆನಿಯಂ ಸರಣಿಯ ಕೊನೆಯ ಕೃತಿ. ಇದು ಪ್ರಸಿದ್ಧ ಪ್ರಾಣಿ ತಜ್ಞ ಮತ್ತು ಸಾಹಸಿ ಜೆರಾಲ್ಡ್, ಡ್ಯುರೆಲ್‌ನ 'ಥ್ರೀ ಸಿಂಗಲ್ಸ್ ಟು ಅಡ್ವೆಂಚರ್' ಕೃತಿಯ ಸಂಗ್ರಹಾನುವಾದ. ದಕ್ಷಿಣ ಅಮೆರಿಕದ ಗಯಾನ ದೇಶಕ್ಕೆ ಅಪೂರ್ವ ಪ್ರಾಣಿಗಳನ್ನು ಸಂಗ್ರಹಿಸಲು ಹೋದ ಆತನ ಸಾಹಸಯಾತ್ರೆಯ ರೋಮಾಂಚಕ ವೃತ್ತಾಂತಗಳನ್ನು ಈ ಕೃತಿ ಸೆರೆಹಿಡಿದಿದೆ.

**ಪ್ಯಾಪಿಲಾನ್ ಭಾಗ-೧ ಮತ್ತು ಭಾಗ-೨:** ಹೆನ್ರಿ ಛಾರೇರ ಅವರ ಪ್ಯಾಪಿಲಾನ್ ಕೃತಿಯನ್ನು ಪ್ರದೀಪ ಕೆಂಚೆಗೆ ಅವರೊಂದಿಗೆ ಸೇರಿ ಅನುವಾದಿಸಿದ್ದಾರೆ. ಇದೊಂದು ಸಂಗ್ರಹ ಭಾವಾನುವಾದ. ಅವರೇ ಹೇಳಿರುವಂತೆ ಇಪ್ಪತ್ತನೇ ಶತಮಾನದ ನಾಗರೀಕತೆಯ ಸರ್ವಶ್ರೇಷ್ಠ ಸಾಹಸದ ಸತ್ಯಕಥೆ. ಇದು ಅನೇಕ ಸ್ಥರಗಳಲ್ಲಿ ಇಪ್ಪತ್ತನೇ ಶತಮಾನದ ನಾಗರೀಕತೆಯ ವಿಶ್ವರೂಪ ದರ್ಶನ ಮಾಡಿಸುವುದರಿಂದ ಇದನ್ನು ಈ ಶತಮಾನದ ಪ್ರಾತಿನಿಧಿಕ ಕೃತಿ ಎಂದು ಹೇಳಬಹುದು.

## ಅಧ್ಯಾಯ: ೨
## ಮಾಯಾಲೋಕದ ಅಭಿವ್ಯಕ್ತಿ ತಂತ್ರ

ತೇಜಸ್ವಿ ಸಾಹಿತ್ಯದಲ್ಲಿ ಅತ್ಯಂತ ವಿನೂತನವಾದದ್ದು ಅವರ ಮಾಯಾಲೋಕ. ಮಾಯಾಲೋಕ ಹಲವು ನೆಲೆಗಳಲ್ಲಿ ವಿಶಿಷ್ಟವಾಗುತ್ತದೆ. ಅದರಲ್ಲಿ ಅವರ ಅಭಿವ್ಯಕ್ತಿ ತಂತ್ರ ಗಮನಿಸತಕ್ಕದ್ದಾಗಿದೆ. ಮಾಯಾಲೋಕ ಕಾದಂಬರಿಯ ಸಿದ್ಧ ಚೌಕಟ್ಟನ್ನು ಒಡೆದು ಒಂದು ಹೊಸ ನಡೆಯನ್ನು ಕಟ್ಟಿಕೊಳ್ಳುತ್ತದೆ. ಅದರ ರಚನೆಯ ವಿನ್ಯಾಸದಲ್ಲೇ ನೂತನತೆ ಇದೆ. ಇನ್ನು ಅಭಿವ್ಯಕ್ತಿ ತಂತ್ರದಲ್ಲೂ ಹೊಸತನವನ್ನು ಕಂಡುಕೊಂಡಿರುವುದು ಎದ್ದು ಕಾಣುತ್ತದೆ. ರೇಖಾಚಿತ್ರಗಳನ್ನು ಅಭಿವ್ಯಕ್ತಿ ತಂತ್ರವಾಗಿ ಬಳಸಿಕೊಂಡಿದೆ. ಮತ್ತೊಂದು ರೀತಿಯಲ್ಲಿ ಮಾಯಾಲೋಕ ಬಿಡಿ ಬಿಡಿ ಚಿತ್ರಗಳಂತೆ ಕಂಡುಬರುವುದರಿಂದ ಇದು ಹಲವು ಸಣ್ಣ ಕಥೆಗಳ ಸಂಯೋಜನೆಯೋ ಎಂಬಂತೆ ಭಾಸವಾಗುತ್ತದೆ. ಜೊತೆಗೆ ಕಾದಂಬರಿಯ ಸಮಗ್ರತೆಯೂ ಇದಕ್ಕಿದೆ. ಹೀಗಾಗಿ ಇಲ್ಲಿನ ಚಿತ್ರಣಗಳು ಬಿಡಿ ಬಿಡಿಯಾಗಿಯೂ ಸ್ವತಂತ್ರ, ಅಖಂಡವಾಗಿಯೂ ಸುಸ್ಪಷ್ಟ.

ಮೊದಲೇ ಹೇಳಿರುವಂತೆ ಮಾಯಾಲೋಕ ಬಿಡಿ ಬಿಡಿ ಚಿತ್ರಗಳಂತೆ ಗೋಚರಿಸುತ್ತದೆ. ಒಮ್ಮೆ ನಿರೂಪಿಸಲ್ಪಡುವ ಭಾಗ ನಿಂತುಹೋಗಿ ಮುಂದೆ ಮತ್ಯಾವುದೋ ಭಾಗ ಆರಂಭವಾಗುತ್ತದೆ. ನಿಂತಿರುವ ಭಾಗ ಇನ್ನೆಲ್ಲೋ ಪುನರಾರಂಭಗೊಂಡು ಮುಂದುವರಿಯುತ್ತದೆ. ಆದರೆ ಎಲ್ಲೂ ಕಾದಂಬರಿ ಹಾದಿ ತಪ್ಪುತ್ತಿದೆ ಎಂದಾಗಲೀ ಈ ಭಾಗ ಅರ್ಧಕ್ಕೇ ನಿಂತು ಹೋಗುತ್ತಿದೆ ಎಂದಾಗಲೀ ಅನ್ನಿಸುವುದೇ ಇಲ್ಲ. ಯಾಕೆಂದರೆ ಎಲ್ಲ ಭಾಗಗಳೂ ಒಂದಕ್ಕೊಂದು ಸ್ವತಂತ್ರ ಮತ್ತು ಸಂಬಂಧ ಕೂಡ. ಬಿಡಿ ಬಿಡಿ ಭಾಗಗಳನ್ನು ಓದಿಕೊಂಡರೂ ಕಾದಂಬರಿಯ ಗ್ರಹಿಕೆಯಲ್ಲಿ ಯಾವ ತೊಡಕೂ ಆಗುವುದಿಲ್ಲ. ಅಂದರೆ ಕಾದಂಬರಿ ಹಿಡಿಯಾಗಿಯೂ ಬಿಡಿಯಾಗಿಯೂ ಎರಡು ಮುಖದಲ್ಲೂ ದಕ್ಕುತ್ತದೆ ಎನ್ನುವುದೇ ಇದರ ಸಾರ.

ಮಾಯಾಲೋಕದ ಮತ್ತೊಂದು ವೈಶಿಷ್ಟ್ಯ ಎಂದರೆ ಇಲ್ಲಿ ಮಹಾ ಖಳನಾಯಕರೂ ಇಲ್ಲ ಮಹಾ ನಾಯಕರೂ ಇಲ್ಲ. ಇದೇ ಖಳ ಪಾತ್ರವೆಂದು ಗುರ್ತಿಸುವಂಥ ಯಾವುದೇ ನೇತ್ಯಾತ್ಮಕ ಪಾತ್ರಗಳೂ ಕಾದಂಬರಿಯಲ್ಲಿಲ್ಲ. ಇದು ತೇಜಸ್ವಿಯವರ 'ಯಾವುದೂ ಅಮುಖ್ಯವಲ್ಲ' ಎನ್ನುವ ತತ್ವಕ್ಕೆ ಪೂರಕವಾಗಿದ್ದರೂ ಇದೂ ಒಂದು ನೂತನ ಕಥನ ತಂತ್ರವೇ ಆಗಿರುವ ಸಾಧ್ಯತೆ ಇದೆ. ಇಕ್ಬಾಲ್ ಸಾಬಿಯಲ್ಲಿ ಸ್ವಲ್ಪಮಟ್ಟಿಗೆ ಖಳನ ಗುಣಲಕ್ಷಣಗಳು ಕಂಡುಬಂದರೂ ಅವನನ್ನು ಖಳನಾಯಕನೆನ್ನಲು ಸಾಧ್ಯವೇ ಇಲ್ಲ. ಇವರ ಜೊತೆಗೆ ಎಲ್ಲರ ಗಮನಸೆಳೆಯಬಲ್ಲ ನಾಯಕ ವ್ಯಕ್ತಿತ್ವವೂ ಯಾವುದೂ ಇಲ್ಲ. ಈ ದೃಷ್ಟಿಯಲ್ಲಿ ನಾಯಕ, ಪ್ರತಿನಾಯಕ/ಖಳನಾಯಕನ ಪಾತ್ರ ಪೋಷಣೆಯಲ್ಲೇ ಮುಳುಗಿದ್ದ ಕನ್ನಡ

ಕಾದಂಬರಿ ಪ್ರಪಂಚದ ಒಂದು ನಿರ್ಮಿತ ಚೌಕಟ್ಟನ್ನು ಮುರಿದು ಮಾಯಾಲೋಕ ತನ್ನದೇ ಹೊಸ ಚೌಕಟ್ಟನ್ನು ನಿರ್ಮಿಸಿಕೊಂಡಿದೆ ಎನಿಸುತ್ತದೆ. ಅಭಿವ್ಯಕ್ತಿಯಲ್ಲಿ ಇದೊಂದು ಹೊಸ ಪ್ರಯೋಗ ಎನ್ನಬಹುದು.

ಮಾಯಾಲೋಕ ಸರಳವಾಗಿ ಅತ್ಯಂತ ಸಹಜ ನಡೆಯಲ್ಲಿ ಮುಂದುವರಿಯುತ್ತಾ ಇದ್ದಕ್ಕಿದ್ದಂತೆ ಗಂಭೀರವಾಗಿಬಿಡುತ್ತದೆ "ಮುಂದುವರಿದ ರಾಷ್ಟ್ರವಾಗಬೇಕೆಂಬ ನಾಗಾಲೋಟದ ಸ್ಪರ್ದೆಗಿಳಿದ ಭಾರತದಲ್ಲಿ ಹಳ್ಳಿಗಳು ನೋಡಲು ತಣ್ಣಗೆ ನಿದ್ರಿಸುತ್ತಿರುವಂತೆ ಕಂಡರೂ ಒಳಹೊಕ್ಕು ನೋಡಿದರೆ ಭಯಂಕರ ಅಲ್ಲೋಲ ಕಲ್ಲೋಲದ ಹೆದ್ದೆರೆಗಳ ಮೇಲೆ ತುಯ್ದಾಡುತ್ತಿರುವುದು ಕಾಣುತ್ತದೆ. ಮುಂದುವರಿಯುವುದಕ್ಕೂ ಹಳ್ಳಿಗಳ ದಿನನಿತ್ಯದ ಘಟನಾವಳಿಗಳ ಮಹಾಪೂರಕ್ಕೂ ನೇರ ಸಂಬಂಧ ಕಾಣದಿದ್ದರೂ ಈ ಬಗೆಯ ಅಗಾಧ ಚಟುವಟಿಕೆ, ಚಡಪಡಿಕೆಗಳಿಗೆ ಪರಂಪರಾಗತ ಜೀವನ ಶೈಲಿಯಿಂದ ವೇಗವಾಗಿ ಬದಲಾಗಲು ಹವಣಿಸುತ್ತಿರುವ ದೇಶವೇ ಪರೋಕ್ಷವಾಗಿ ಮತ್ತು ಅಂತರ್ಗಾಮಿಯಾಗಿ ಪ್ರೇರಣೆ ಎನಿಸುತ್ತದೆ. ಇಲ್ಲದಿದ್ದರೆ ನಿಮ್ಮೊಂದು ವಾರದ ದಿನಚರಿಯಲ್ಲಿ ಒಂದು ಬೃಹತ್ ಕಾದಂಬರಿಗಾಗುವಷ್ಟು ಘಟನಾವಳಿಗಳೂ ಗೊಂದಲಗಳೂ ಕಿಕ್ಕಿರಿಯುವುದಕ್ಕೆ ನೀವು ಇನ್ನೇನುತಾನೆ ವಿವರಣೆ ನೀಡಬಲ್ಲಿರಿ! "(ಮಾಯಾಲೋಕ-೧, ಪುಟ-೧೬೧ ಪ್ರ. ಪುಸ್ತಕ ಪ್ರಕಾಶನ, ಎರಡನೆ ಮುದ್ರಣ-೨೦೦೬, ಲೇ. ಕೆ.ಪಿ.ಪೂರ್ಣಚಂದ್ರ ತೇಜಸ್ವಿ) ಹೀಗೆ ವಿವರಣೆ ನಿಂತ ಕೂಡಲೇ ಮತ್ತೆ ಅದೇ ಸಹಜತೆಗೆ ಕೂಡಿಕೊಂಡುಬಿಡುತ್ತದೆ. ಅಂದರೆ ಕಥನದ ನಡುವೆ ಆವೇಶದಲ್ಲಿ ತಮ್ಮ ತೀರ್ವ ಭಾವನೆಗಳನ್ನು ತಾರ್ಕಿಕವಾಗಿ, ವೈಚಾರಿಕವಾಗಿ ಚರ್ಚಿಸುವ ತೇಜಸ್ವಿ ಮತ್ತೆ ಕಾದಂಬರಿ ನಡೆಗೆ ಹಿಂದಿರುಗುವುದು ಕಾಣುತ್ತದೆ.

೧

ಮಾಯಾಲೋಕದ ಭಾಷೆ ಪ್ರಾದೇಶಿಕ ಸಹಜತೆಯಿಂದ ಕೂಡಿದೆ, ಆ ಭಾಷೆಯ ಸಹಜ ದೇಸೀ ಸೊಗಡಿನಿಂದಲೇ ಇಲ್ಲಿ ಹಾಸ್ಯ ಚಿಮ್ಮುತ್ತದೆ. ಲೇಖಕರು ಕಾದಂಬರಿಯನ್ನು ನವಿರು ಹಾಸ್ಯದ ಮೂಲಕ ತಂದಿದ್ದಾರೆಂಬುದು ನಿಜವಾದರೂ ಅವರು ಎಲ್ಲೂ ಹಾಸ್ಯಕ್ಕೆಂದೇ ಸನ್ನಿವೇಶಗಳನ್ನು ಸೃಷ್ಟಿಸಿರುವುದು ಕಂಡುಬರುವುದಿಲ್ಲ. ಕಾದಂಬರಿಯ ಸಹಜ ಸನ್ನಿವೇಶಗಳಲ್ಲಿಯೇ ಹಾಸ್ಯದ ಸೆಳವಿರುವುದನ್ನು ಗುರ್ತಿಸಬಹುದು. "ಲೋ ನಾಗ ನಿನಗೆ ಹೆದರಿಕೆ ಆದ್ರೆ ನೀನು ಹೊರಗೆ ಬಾ. ನಾನು ಎಳೆದುಹಾಕುತ್ತೇನೆ' ಎಂದು ಬೊಮ್ಮನ ಕಡೆ ತಿರುಗಿ 'ಸ್ವಲ್ಪ ತಿಕಬಾಯಿ ಮುಚ್ಚಿಕೊಂಡು ನಿಂತುಗೊಳ್ಳಯ್ಯಾ, ಊರಹಂದಿ ಹೊಡಕೊಂಡು ಹೆಬ್ಬುಲಿ ಶಿಕಾರಿ ಮಾಡಿದೋನಹಂಗೆ ಮಾತಾಡಬೇಡ' ಎಂದು ಅವನ ಕಡೆ ತಿರುಗಿ ಮೂದಲಿಸುತ್ತಿರಬೇಕಾದರೆ 'ಅಯ್ಯಯ್ಯೋ ಹಂದಿ ಮೈಮೇಲೆ ಬಂತಲ್ರೋ, ಅಯ್ಯಯ್ಯೋ ಅಯ್ಯಯ್ಯೋ' ಎಂದು ಕಿವಿಗಡಚಿಕ್ಕುವಂಥ ಆರ್ತನಾದ ಒಂದು ಗುಲಾಬಿ ಮಟ್ಟಿನಿಂದ ಹೊರಬಿತ್ತು. ಎಲ್ಲರೂ ಏನಾಗುತ್ತಿದೆ ಎಂದು ಸಹ ನಿರೀಕ್ಷಿಸಲು ಹೋಗದೆ ತಮಗೆ ಅತಿ ಹತ್ತಿರದ ಮರ ಹತ್ತಲು ನುಗ್ಗಿದರು. ನಾಗ ಕೊಚ್ಚಿ ಬಿಡಿಸಿದ್ದ ಸುರಂಗದ ನೇರಕ್ಕೆ ಕಿಸುಗಾಲು ಹಾಕಿ ನಿಂತಿದ್ದ ಬಾಯಮ್ಮ ನಾಗನ ಯೋಗಕ್ಷೇಮ ಮರೆತು ಕಾಲಿಗೆ ಬುದ್ಧಿ ಹೇಳಲು ಹವಣಿಸುತ್ತಿರಬೇಕಾದರೆ ಎರಡು ಕಾಲುಗಳ ನಡುವೆ ಕಾಡುಹಂದಿ ಗುರುಗುಟ್ಟುತ್ತಾ ನುಗ್ಗೇಬಿಟ್ಟಿತು. ಬಾಯಮ್ಮ ಕಟಾಚಾರಕ್ಕೆ ಸೊಂಟಕ್ಕೆ

ಮೂರು ಸುತ್ತು ಸುತ್ತಿಕೊಂಡಿದ್ದ ತುಂಡು ಸೀರೆ ಹಂದಿ ಕೋರೆಗೆ ಸಿಕ್ಕಿ ಬಿಚ್ಚಿಕೊಂಡು ಹಂದಿ ತಲೆಗೆ ಮುಸುಗು ಹಾಕಿದ ಹಾಗೆ ಸುತ್ತಿತ್ತು. ಸೀರೆ ಒಳಗೆ ಒಂದು ಕೊಳಕು ಒಳಲಂಗ ಕಟ್ಟಿಕೊಂಡಿಲ್ಲದಿದ್ದರೆ ಬಾಯಮ್ಮ ಅವತ್ತು ಐದಾರು ಜನ ಗಂಡಸರ ನಡುವೆ ಬರಿ ಬೆತ್ತಲೆ ಬಿದ್ದಿರಬೇಕಾಗುತ್ತಿತ್ತು."
(ಮಾಯಾಲೋಕ-೧, ಪುಟ-೧೩೭, ೧೩೮, ಪ್ರ. ಪುಸ್ತಕ ಪ್ರಕಾಶನ, ಎರಡನೆ ಮುದ್ರಣ-೨೦೦೬, ಲೇ. ಕೆ.ಪಿ.ಪೂರ್ಣಚಂದ್ರ ತೇಜಸ್ವಿ)
ಇಲ್ಲಿ ಸನ್ನಿವೇಶವೇ ಹಾಸ್ಯವನ್ನು ಚಿಮ್ಮಿಸುತ್ತಿದೆಯೇ ಹೊರತು ಇದು ಹಾಸ್ಯ ಸನ್ನಿವೇಶವಲ್ಲ. ಇಡೀ ಕಾದಂಬರಿಯೇ ಈ ನಡೆಯಲ್ಲಿ ಮುಂದುವರಿದಿರುವುದನ್ನು ಗಮನಿಸಬಹುದು.

ತೇಜಸ್ವಿಯವರ ಎಲ್ಲ ಕಾದಂಬರಿಗಳಲ್ಲಿ ನವಿರು ಹಾಸ್ಯ ಬೆರೆತುಕೊಂಡಿರುವುದು ನಿಜವಷ್ಟೆ. ಇದು ಗಂಭೀರ ವಿಚಾರವನ್ನು ವೈನೋದಿಕವಾಗಿ ಅಥವಾ ಸರಳವಾಗಿ ಓದುಗರಿಗೆ ತಲುಪಿಸುವ ಕ್ರಮ. ಆದರೆ ಈ ವಿಧಾನದಲ್ಲಿ ಒಂದು ತೊಡಕಿರುವುದನ್ನು ಸೂಕ್ಷ್ಮವಾಗಿ ಗಮನಿಸಿದರೆ ಮನಗಾಣಬಹುದು. ಗಂಭೀರ ವಿಚಾರವೊಂದನ್ನು ಹಾಸ್ಯ ದಾಟಿಯಲ್ಲಿ ಹೇಳಿದಾಗ ಓದುಗರೂ ಕೂಡ ಅದನ್ನು ಹಾಸ್ಯದ ದಾಟಿಯಲ್ಲೇ ಸ್ವೀಕರಿಸುವ ಅಪಾಯವಿರುತ್ತದೆ. ಇದರಿಂದ ಆ ವಿಚಾರದ ಗಾಂಭೀರ್ಯ ಓದುಗರಿಗೆ ತಲುಪದೇ ಇರುವ ಸಾಧ್ಯತೆಗಳು ಹೆಚ್ಚಿವೆ. ಉದಾಹರಣೆಗೆ ಮಹಾಕಾವ್ಯದಂಥ ಅತ್ಯಂತ ಗಾಂಭೀರ್ಯ ವಸ್ತುವಿಗೆ ಕಥೆಯ ಒಡಲು ಹೇಗೆ ಅಸಾಧ್ಯವೋ ಹಾಗೆ ಮಹತ್ತರ ವಿಚಾರಗಳನ್ನು ತಲುಪಿಸಲು ಹಾಸ್ಯ ಕೂಡ ಅಷ್ಟು ಸಮರ್ಥ ವಾಹಿನಿಯಲ್ಲ. ಒಬ್ಬ ವಿಮರ್ಶಕನಿಗೆ ಹಾಸ್ಯದ ಹಿಂದಿನ ಗಾಂಭೀರ್ಯ ಅರಿವಿಗೆ ಬರಬಹುದು ಏಕೆಂದರೆ ಹುಡುಕುವುದೇ ಆತನ ಕೆಲಸ ಆದರೆ ಸಾಮಾನ್ಯ ಓದುಗರ ಸ್ಥಿತಿ? ಓದುಗರು ಸಾಮಾನ್ಯವಾಗಿ ಕಾದಂಬರಿಯ ವಾಚ್ಯ ಧ್ವನಿಯಲ್ಲಿಯೇ ಅದರ ಅರ್ಥವನ್ನು ಗ್ರಹಿಸಬಲ್ಲರು. ಹಾಸ್ಯದ ಹಿಂದಿನ ಗಂಭೀರತೆಯನ್ನು ಹುಡುಕುವುದು ವಾಚ್ಯದಲ್ಲಿರುವ 'ಧ್ವನಿ'ಯನ್ನು ಹುಡುಕಿದಂತೆಯೇ ಸರಿ. ಇದಕ್ಕೆ ಚಾರ್ಲಿ ಚಾಪ್ಲಿನ್‌ನ ಚಲನಚಿತ್ರಗಳನ್ನು ಉದಾಹರಣೆಯಾಗಿ ನೋಡಬಹುದು.

ಚಾಪ್ಲಿನ್‌ನ ಚಿತ್ರಗಳನ್ನು ಇಡೀ ಜಗತ್ತೇ ಹಾಸ್ಯಕ್ಕಾಗಿ ನೋಡುತ್ತದೆ. ಅಲ್ಲಿನ ಪ್ರತಿಯೊಂದೂ ಘಟನೆಗಳನ್ನು ಹಾಸ್ಯದಿಂದಲೇ ವೀಕ್ಷಿಸುತ್ತದೆ. ಅಲ್ಲಿನ ದುರಂತವನ್ನೂ ಹಾಸ್ಯದಿಂದಲೇ ಆನಂದಿಸುತ್ತದೆ. ವಿಮರ್ಶಕರು ಚಾಪ್ಲಿನ್‌ನ ಚಿತ್ರಗಳನ್ನು ಆ ಕಾಲದ ವ್ಯಂಗ್ಯವೆಂದೂ, ಆಗಿನ ಕರಾಳ ಪರಿಸ್ಥಿತಿಯ ಕನ್ನಡಿಯೆಂದೂ ಬಣ್ಣಿಸಿರಬಹುದು. ಅದು ನಿಜವೂ ಹೌದು. ವಿಶ್ವ ಮಹಾಸಮರಗಳ ಸಂದರ್ಭದಲ್ಲಿನ ಸರ್ವಾಧಿಕಾರಿಗಳ ದಬ್ಬಾಳಿಕೆ, ಸೈನಿಕರ ಪಾಡು, ಮಿಲಿಟರಿ ಆಡಳಿತದಲ್ಲಿ ಸಿಲುಕಿದ ಸಾಮಾನ್ಯ ಜನರ ಯಾತನೆ, ಆಹಾರದ ತೀವ್ರ ಅಭಾವವಾಗಿ ಅನ್ನಕ್ಕಾಗಿ ಪರದಾಟ, ಕೈಗಾರಿಕೀಕರಣದ ಯಾಂತ್ರಿಕತೆ- ಇಂಥ ಹತ್ತಾರು ವಿಚಾರಗಳನ್ನು ಚಾಪ್ಲಿನ್‌ನ ಚಲನಚಿತ್ರಗಳು ಹಾಸ್ಯದ ಮೂಲಕ ಅದ್ಭುತವಾಗಿ ಹೇಳುತ್ತವೆ. ಆದರೆ ಚಿತ್ರದಲ್ಲಿರುವ ಈ ವಿಚಾರಗಳು ವೀಕ್ಷಕರೆಲ್ಲರಿಗೂ ತಲುಪಿವೆಯೇ ಎಂದರೆ ಇಲ್ಲವೆಂದೇ ಹೇಳಬೇಕು. ಚಾಪ್ಲಿನ್ ತನ್ನ ಚಿತ್ರವೊಂದರ ಸನ್ನಿವೇಶದಲ್ಲಿ ಹಸಿವನ್ನು ತಾಳಲಾರದೆ ತನ್ನ ಷೂವನ್ನೇ ಕಚ್ಚಿ ತಿನ್ನುತ್ತಾನೆ. ವೀಕ್ಷಕರಿಗೆ ಅಲ್ಲಿಯೂ ಹಾಸ್ಯವಲ್ಲದೆ ಮತ್ತೇನೂ ಹೊಳೆಯಲು ಸಾಧ್ಯವಿಲ್ಲ. ಒಬ್ಬ ವಿಮರ್ಶಕ ಮಾತ್ರ ಆ ಹಸಿವಿನ ಹಿಂದಿನ ದುರಂತವನ್ನು ಗುರ್ತಿಸಬಲ್ಲ. ಹೀಗಾಗಿ ತೇಜಸ್ವಿ ಸಾಹಿತ್ಯದಲ್ಲಿ ಕಥನ ತಂತ್ರವಾಗಿ ಬರುವ ನವಿರು ಹಾಸ್ಯ ಓದುಗರ ದೃಷ್ಟಿಯಿಂದ ತೇಜಸ್ವಿ ಸಾಹಿತ್ಯದ ಮಿತಿಯೆಂದೇ ಹೇಳಬೇಕು. ಗಂಭೀರತೆಯನ್ನು ನವಿರು ಹಾಸ್ಯದ ಮೂಲಕ ಸರಳವಾಗಿ

ಹೇಳುವುದು ಅದ್ಭುತ ಅಭಿವ್ಯಕ್ತಿ ತಂತ್ರ ಎಂದು ಹೇಳುವ ವಿಮರ್ಶಕರು ಈ ನಿಟ್ಟಿನಲ್ಲಿಯೂ ಯೋಚಿಸಬೇಕಿದೆ.

೨

ಮಾಯಾಲೋಕ ಮೊದಲು ಗಮನ ಸೆಳೆಯುವುದು ಅದರ ರೇಖಾಚಿತ್ರಗಳಿಂದ. ಹೌದು ಇದು ಕನ್ನಡ ಕಾದಂಬರೀ ಪ್ರಕಾರಕ್ಕೆ ಹೊಸದೊಂದ ಪ್ರಯತ್ನ. ಈ ಸ್ಕೆಚ್ ಮತ್ತು ರೇಖಾಚಿತ್ರಗಳಿಂದಲೇ ತೇಜಸ್ವಿ ಮಾಯಾಲೋಕದಲ್ಲಿ ಕನ್ನಡ ಸಾಹಿತ್ಯಕ್ಕೇ ವಿನೂತನವಾದ ಅಭಿವ್ಯಕ್ತಿ ವಿಧಾನವನ್ನು ಕಂಡುಕೊಂಡಿದ್ದಾರೆ ಎಂದು ಹೇಳಬಹುದು. ಕಾದಂಬರಿಯುದ್ದಕ್ಕೂ ಸ್ಕೆಚ್ ಮತ್ತು ರೇಖಾಚಿತ್ರಗಳನ್ನು ಬಳಸಿ ಅದರ ಮೂಲಕ ದೃಶ್ಯಪ್ರತಿಮೆ ಮತ್ತು ಕಾವ್ಯ ಪ್ರತಿಮೆಗಳ ನಡುವೆ ಒಂದು ಮುಖಾಮುಖಿಯನ್ನು ಒಡ್ಡಿ ಹೊಸದೊಂದು ಸಂವೇದನೆಯನ್ನು ಸೃಷ್ಟಿಸಲು ತೇಜಸ್ವಿ ಪ್ರಯತ್ನಿದ್ದಾರೆ. ಕಾದಂಬರಿಯಲ್ಲಿ ಬರುವ ರೇಖಾಚಿತ್ರಗಳು ಸಾಂದರ್ಭಿಕ ವಿವರಣೆಗಳಿಗೆ ನೀಡಿರುವ ದೃಶ್ಯರೂಪ ಎನ್ನುವಂತೆ ಕಂಡುಬಂದರೂ ಅವು ಬೇರೆಯದೇ ಆಯಾಮವನ್ನು ಪಡೆಯುತ್ತವೆ. ಈ ಕುರಿತು ತೇಜಸ್ವಿ ಹೀಗೆ ಹೇಳುತ್ತಾರೆ " ಈ ಕೃತಿಯಲ್ಲಿ ಹಾಸುಹೊಕ್ಕಾಗಿರುವ ಸ್ಕೆಚ್ ಮತ್ತು ರೇಖಾಚಿತ್ರಗಳು ಕೃತಿಯ ಸಾಂದರ್ಭಿಕ ವಿವರಣೆಯಾಗಿ ಕೊಟ್ಟಿರುವ ಚಿತ್ರಗಳಲ್ಲ. ಕೆಲವೆಡೆ ಹಾಗೆ ಕಂಡುಬಂದರೂ ಅದು ಕೇವಲ ಆಕಸ್ಮಿಕವಷ್ಟೇ ಹೊರತು ಉದ್ದೇಶಪೂರ್ವಕವಲ್ಲ. ಇದೊಂದು ಕೊಲಾಜ್ ಮಾದರಿಯ ಕಲಾಕೃತಿ. ಇಲ್ಲಿನ ಕಥಾ ಪ್ರತಿಮೆಗಳೂ ದೃಶ್ಯಪ್ರತಿಮೆಗಳೂ ಓದುತ್ತಾ ಹೋದಂತೆ ಒಂದರ ಮೇಲೊಂದು ಸಂಯೋಜನೆಗೊಳ್ಳುತ್ತಾ ಮಾಯಾಲೋಕವನ್ನು ಸೃಷ್ಟಿಸುತ್ತವೆ. ಇದೊಂದು ಬೆಟ್ಟು ತೋರಿಸಿ ನಿರ್ದೇಶಿಸಲಾರದಷ್ಟು ಸೂಕ್ಷ್ಮ ಮತ್ತು ಪರೋಕ್ಷ ಸಂವಹನ ಕ್ರಿಯೆಯಾದ್ದರಿಂದ ನಾನು ಇದಕ್ಕಿಂತ ಹೆಚ್ಚಿನ ವಿವರಣೆ ಕೊಡಲಾರೆ." (ಮಾಯಾಲೋಕದ ಮುನ್ನುಡಿಯಲ್ಲಿ)

ಇಲ್ಲಿನ ಸ್ಕೆಚ್ ಮತ್ತು ರೇಖಾಚಿತ್ರಗಳು ಕನ್ನಡದಲ್ಲಿ ವಿನೂತನವಾಗಿದ್ದು ಕಾದಂಬರಿಗೆ ಹೊಸ ಆಯಾಮವನ್ನು ನೀಡುತ್ತವೆ ಎಂಬುದು ನಿಜವಾದರೂ ಕಾದಂಬರಿಯನ್ನು ಓದುವ ಓದುಗರ ನಿರಂತರತೆಗೆ ಈ ಚಿತ್ರಗಳೆ ತಡೆ ಒಡ್ಡುತ್ತವೆಯೋ ಎಂಬ ಅನುಮಾನವೂ ಮೂಡುತ್ತದೆ. ಯಾಕೆಂದರೆ ಒಂದೇ ಪುಟದಲ್ಲಿ ಅರ್ಧ ಅಕ್ಷರ ಇನ್ನರ್ಧದಲ್ಲಿ ಚಿತ್ರಗಳು ಬಳಕೆಯಾಗಿದ್ದು ಚಿತ್ರಗಳು ಓದುಗರ ಗಮನ ಸೆಳೆಯುವುದರಲ್ಲಿ ಅನುಮಾನವಿಲ್ಲ. ಹೀಗಿರುವಾಗ ಓದುಗನ ಮನಸ್ಸು ಪಲ್ಲಟಗೊಳ್ಳುವ ಸಂಭವವಿದೆ. ಇದರ ಜೊತೆಗೆ ಬ್ರೆಕ್ಟ್‌ನ ಥಿಯರಿಯೊಂದು ಹೇಳುವಂತೆ ನಾಟಕದಲ್ಲಿ ನೋಡುಗ ತನ್ಮಯವಾಗುವುದನ್ನು ತಪ್ಪಿಸಲು ಗಂಭೀರ ನಾಟಕದಲ್ಲಿ ಹಾಸ್ಯವನ್ನು ತರುವಂತೆ ಕಾದಂಬರಿಯಲ್ಲಿ ಮೈಮರೆಯುವುದನ್ನು ತಪ್ಪಿಸಲು ಈ ಚಿತ್ರಗಳು ಸಹಾಯಕವಾಗಬಲ್ಲವೇನೋ ಎನಿಸುತ್ತದೆ. ಇಲ್ಲಿ ಬಳಸಲಾಗಿರುವ ಚಿತ್ರಗಳು ಪೂರ್ಣ ರೇಖಾಚಿತ್ರಗಳಲ್ಲ. ಫೋಟೋಗಳನ್ನು ಕಂಪ್ಯೂಟರ್‌ನಲ್ಲಿ ಫೋಟೋ ಎಡಿಟಿಂಗ್ ಸಾಫ್ಟ್‌ವೇರ್‌ನ ಮೂಲಕ ರೇಖಾಚಿತ್ರಗಳಾಗಿ ಪರಿವರ್ತಿಸಲಾಗಿದೆ. ಈ ರೀತಿ ಪರಿವರ್ತಿಸಲು ಬ್ಲರ್ ಮಾಡಿದ ಸಂದರ್ಭದಲ್ಲಿ ರೇಖಾಚಿತ್ರಗಳ ಅಂಚು ಬಿಳಿ ಬಣ್ಣದೊಂದಿಗೆ ಬೆರೆತು ಹೋಗಿರುವುದರಿಂದ ಅವುಗಳಿಗೆ ಬಾರ್ಡರ್ ಬರೆಯಲಾಗಿದೆ. ತಾಂತ್ರಿಕವಾಗಿ ಇದೇನೇ ಚಮತ್ಕಾರಗಳಿದ್ದರೂ ಚಿತ್ರಗಳನ್ನು ಸಾರ್ವತ್ರಿಕಗೊಳಿಸುವ ಉದ್ದೇಶದಿಂದಲೇ ಫೋಟೋಗಳನ್ನು ರೇಖಾಚಿತ್ರಗಳಾಗಿ ಪರಿವರ್ತಿಸಿರುವುದು ಕಂಡುಬರುತ್ತದೆ.

ತೇಜಸ್ವಿ ತಮ್ಮ ಛಾಯಾಗ್ರಹಣ ಕಲೆಯನ್ನು ಹಾಗೂ ತಾವೇ ತೆಗಿದಿರುವ ಫೋಟೋಗಳನ್ನು ಸಾಹಿತ್ಯ ಕೃತಿಯೊಂದರಲ್ಲಿ ಬಳಸಿ ಕೇವಲ ನೋಡುವುದಕ್ಕಷ್ಟೇ ಇದ್ದ ಫೋಟೋಗಳಿಗೆ ಸಾಹಿತ್ಯಕ ಆಯಾಮವನ್ನು ಒದಗಿಸಿದ್ದಾರೆ. ಆ ಮೂಲಕ ಫೋಟೋಗ್ರಫಿಗೊಂದು ಬಳಕೆಯ ಹೊಸ ಸಾಧ್ಯತೆಯನ್ನು ತೆರೆದು ತೋರಿಸಿದ್ದಾರೆ. ಒಟ್ಟನಲ್ಲಿ ರೇಖಾಚಿತ್ರಗಳ ಬಳಕೆ ಮಾಯಾಲೋಕದಲ್ಲಿ ಸಾರ್ಥಕ ಎಂದೇನು ಹೇಳುವಂತಿಲ್ಲ. ಚಿತ್ರಗಳಿಲ್ಲದಿದ್ದರೂ ಕಾದಂಬರಿಯ ಅರ್ಥಕ್ಕೆ ಯಾವುದೇ ಕುಂದೊದಗುತ್ತಿರಲಿಲ್ಲ. ಚಿತ್ರಗಳ ಬಳಕೆಯಿಂದ ಕಾದಂಬರಿಗೆ ವಿಶೇಷ ಮಹತ್ವ ಬಂದಿದೆ ಎಂದು ಪರಿಗಣಿಸಲೂ ಬರುವುದಿಲ್ಲ. ಆದರೆ ಈ ರೇಖಾಚಿತ್ರಗಳ ಬಳಕೆ ಕಾದಂಬರಿಯ ವಿನೂತನ ನಿರೂಪಣಾ ತಂತ್ರಕ್ಕೆ ಮುನ್ನುಡಿ ಎಂಬುದನ್ನು ಮರೆಯಲಾಗುವುದಿಲ್ಲ.

ಕಾದಂಬರಿಯಲ್ಲಿ ರೇಖಾಚಿತ್ರಗಳ ಬಳಕೆಗೆ ಇಷ್ಟೆಲ್ಲಾ ವಿವರಣೆ ವಿಶ್ಲೇಷಣೆ ನೀಡಿದರೂ ಈ ಕುರಿತು ಲೇಖಕರ ಉದ್ದೇಶ ಮಾತ್ರ ಸ್ಪಷ್ಟ "ನಾಲ್ಕು ದಶಕಗಳ ಹಿಂದೆ ಅಬಚೂರಿನ ಪೋಸ್ಟಾಫೀಸು ಕಥಾ ಸಂಕಲನಕ್ಕೆ ಮೊದಲ ಮಾತುಗಳನ್ನು ಬರೆಯುತ್ತಾ ಬದಲಾಗುತ್ತಿರುವ ಸನ್ನಿವೇಶಗಳ ಸವಾಲುಗಳನ್ನು ಎದುರಿಸಲು ನಾವು ಹೊಸ ದಿಗಂತಗಳತ್ತ ಹೋಗಬೇಕಾಗಿರುವುದನ್ನು ಜ್ಞಾಪಿಸಿದ್ದೆ. ಈಗ, ಇಪ್ಪತ್ತೊಂದನೇ ಶತಮಾನ ಪ್ರಾರಂಭವಾಗುತ್ತಿದ್ದಂತೆ ಅಂಥದೇ ಪರಿಸ್ಥಿತಿಯಲ್ಲಿ ಮತ್ತೊಮ್ಮೆ ನಿಂತಿದ್ದೇವೆಂದು ಅನಿಸುತ್ತಿದೆ. ನಮ್ಮೆದುರು ಬದಲಾವಣೆಗಳ ಮಹಾಪೂರವೇ ಹರಿಯುತ್ತಿದೆ. ಹೊಸ ನುಡಿಗಟ್ಟುಗಳು, ಹೊಸ ಉಕ್ತಿಭಂಗಿ, ಹೊಸ ಅಭಿವ್ಯಕ್ತಿ ವಿಧಾನಗಳ ಕಡೆ ನಾವೀಗ ಗಮನ ಹರಿಸಿ ಹೊಸ ದಿಗಂತಗಳತ್ತ ಅನ್ವೇಷಣೆ ಹೊರಡಬೇಕಿದೆ" (ಮಾಯಾಲೋಕದ ಮುನ್ನುಡಿಯಲ್ಲಿ)

೩

ಮಾಯಾಲೋಕ ಅಭಿವ್ಯಕ್ತಿಯಲ್ಲಿ ಹೊಸ ತಂತ್ರವನ್ನು ಅನುಸರಿಸಿದೆ ಎಂದು ಈಗಾಗಲೇ ಚರ್ಚಿಸಲಾಗಿದೆ. ಇಲ್ಲಿ ಲೇಖಕ ನಿರೂಪಕನಾಗಿ ಮಾಯಾಲೋಕವನ್ನು ನರೇಟ್ ಮಾಡುತ್ತಾನೆ. ಹಾಗಾಗಿ ಇಡೀ ಮಾಯಾಲೋಕವೇ ನಿರೂಪಕನ ದೃಷ್ಟಿಯಲ್ಲೇ ನಿರೂಪಿಸಲ್ಪಡುತ್ತದೆ. ಕಾದಂಬರಿಯಲ್ಲಿ ನಿರೂಪಕ ವಸ್ತುವಿನಿಂದ ದೂರವೇನು ಉಳಿಯುವುದಿಲ್ಲ. ತಾನೂ ಒಂದು ಪಾತ್ರವಾಗಿ ಕಾದಂಬರಿಯುದ್ದಕ್ಕೂ ಮುಖ್ಯ ಪಾತ್ರ ವಹಿಸುತ್ತಾನೆ. ಹಿರಿಯರಾಗಿ, ಬುದ್ಧಿ ಜೀವಿಯಾಗಿ, ಸಲಹೆಗಾರರಾಗಿ, ತೀರ್ಪುಗಾರರಾಗಿ ನಿರೂಪಕ ಸಮಾಜವನ್ನು ತಿದ್ದುವ ಕೆಲಸದಲ್ಲಿ ತೊಡಗಿಕೊಳ್ಳುತ್ತಾನೆ. ಜಗಣ್ಣ. ಮಂಜ, ಅಣ್ಣಪ್ಪಣ್ಣ ಮೆಣಸಿನ ಮಡಿಗೆ ಕರೆಂಟು ಕೊಟ್ಟಿದ್ದರಿಂದ ಕೋಣವೊಂದು ಕರೆಂಟಿಗೆ ಸಿಕ್ಕಿ ಸತ್ತು ಬಿದ್ದಾಗ ಅವರನ್ನು ಬೈಯ್ಯುವುದು ಅವರನ್ನು ತಿದ್ದುವ ದಾಟಿಯಲ್ಲಿ "ನಿಮಗೆ ಮಾನ ಮರ್ಯಾದೆ ಚೂರೂ ಇಲ್ಲ. ಕಣ್ರೋ. ಯಾರದ್ದೋ ಕೋಣ ಸಾಯಿಸಿದ್ದೀವಲ್ಲ ಅನ್ನೋ ಕಳವಳ ಸೈತ ಇಲ್ವಲ್ಲಾ ನಿಮಗೆ. ಇದನ್ನು ತಿನ್ನಬಹುದ? ಬೇಡವಾ? ಇದೆಲ್ಲ ವಿಚಾರ ಆಮೇಲೆ. ಈಗ ಮೊದಲು ಗುಂಡಿತೋಡಿ ಹುಗೀರಿ. ಇನ್ನು ಮೇಲೆ ಇಂಥಾ ಕೆಲಸಕ್ಕೆ ಹೋಗಬೇಡಿ. ಅಲ್ರೋ! ನೀವು ಬೆಳಿಗ್ಗೆ ಬಂದು ನೋಡಿದಾಗ ಒಬ್ಬ ಮನುಷ್ಯ ಹಿಂಗೇ ಇಲ್ಲಿ ಬಿದ್ದಿದ್ದು ಕಾಣಿಸಿತು ಅಂತಿಟ್ಟುಕೊಳ್ಳಿ. ನಿಮ್ಮ ಪರಿಸ್ಥಿತಿ ಹೇಗಿರ್ತದೆ ಊಹಿಸಿ! ಇನ್ನೊಂದು ಸಾರಿ ನೀವು ಕರೆಂಟಿನ ತಂತಿಗೆ ಹೋದದ್ದು ಗೊತ್ತಾದರೆ ನಾನೇ ಪೋಲೀಸಿಗೆ ಕಂಪ್ಲೇಂಟ್ ಕೊಡುತ್ತೇನೆ. ಇದು ಮಾತ್ರ ಗ್ಯಾರಂಟಿ. ನಾನು ತಮಾಷೆಗೆ ಹೇಳುತ್ತಿಲ್ಲ! ಯಾರಿಗೂ ಏನೂ ಅಪಾಯ ಆಗದೆ ಬಂದಿದ್ದ

ಗಂಡಾಂತರದಿಂದ ಪಾರಾಗಿದ್ದೀರ..." (ಮಾಯಾಲೋಕ-೧, ಪುಟ-೧೫೭, ಪ್ರ. ಪುಸ್ತಕ ಪ್ರಕಾಶನ, ಎರಡನೆ ಮುದ್ರಣ-೨೦೦೬, ಲೇ. ಕೆ.ಪಿ.ಪೂರ್ಣಚಂದ್ರ ತೇಜಸ್ವಿ)

ಮಂಜ, ಜಗ್ಗಣ್ಣ ಮತ್ತು ಅಣ್ಣಪ್ಪಣ್ಣ ಎರಡು ಬಕೇಟು ತುಂಬ ಏಡಿಗಳನ್ನು ಹಿಡಿದು ತಮ್ಮ ತಮ್ಮಲ್ಲೇ ಹಂಚಿಕೊಳ್ಳುವ ತಯಾರಿಯಲ್ಲಿದ್ದಾಗ ಅಲ್ಲಿಗೆ ಬರುವ ನಿರೂಪಕ ಆ ಏಡಿಗಳು ತಾನು ಹಿಂದಿನ ದಿನ ಸಾಯಿಸಿ ಹೆಬ್ಬಲಸಿನ ಮರದ ಮೇಲಿಟ್ಟಿದ್ದ ಕೊಳಕುಮಂಡಲ ಹಾವಿಗೇ ಮುತ್ತಿಕೊಂಡಿದ್ದಿರಬೇಕು ಎಂದು ಹೇಳಿ ಹಾವನ್ನು ತಿಂದ ಏಡಿಗಳನ್ನು ತಿನ್ನುವುದರಿಂದ ಮನುಷ್ಯನ ಪ್ರಾಣಕ್ಕೇನೂ ಅಪಾಯವಿಲ್ಲ ಎಂದು ವಿವರಿಸಿದರೂ "ಅವರ ಪ್ರಕಾರ ಕೊಳಕುಮಂಡಲದ ತಲೆ ಕತ್ತರಿಸಿ ಎಸೆದು ನಾವು ಹಾವನ್ನೇ ತಿಂದರೂ ಏನೂ ಆಗುವುದಿಲ್ಲ ಆದ್ದರಿಂದ ನೀವು ಈ ಏಡಿ ಸಾರು ತಿಂದರೆ ಸಾಯುವ ಸಂಭವ ಇಲ್ಲವೇ ಇಲ್ಲ ಎನ್ನುವಷ್ಟು ಕಡಿಮೆ. ಆದರೂ ಮನುಷ್ಯರ ಜೀವಕ್ಕೆ ಸಂಬಂಧಪಟ್ಟ ವಿಚಾರ ಅಂದಮೇಲೆ ಎಲ್ಲಾತರ ಯೋಚನೆ ಮಾಡಬೇಕು" (ಮಾಯಾಲೋಕ-೧, ಪುಟ-೮೩, ಪ್ರ. ಪುಸ್ತಕ ಪ್ರಕಾಶನ, ಎರಡನೆ ಮುದ್ರಣ-೨೦೦೬, ಲೇ. ಕೆ.ಪಿ.ಪೂರ್ಣಚಂದ್ರ ತೇಜಸ್ವಿ) ಎಂದು ನಿರೂಪಕ ಬುದ್ಧಿ ಹೇಳುತ್ತಾನೆ. ಆದರೆ ಏಡಿಯ ಸಾರಿನ ರುಚಿಗಾಗಿ ಕಾದಿದ್ದ ಮಂಜ, ಜಗ್ಗಣ್ಣ ಮತ್ತು ಅಣ್ಣಪ್ಪಣ್ಣರಿಗಂತೂ ಈ ಬುದ್ಧಿವಾದವನ್ನು ಒಪ್ಪಿಕೊಳ್ಳುವುದು ಪ್ರಾಣಸಂಕಟವಾಗಿತ್ತು.

೪

ಕಾದಂಬರಿಯಲ್ಲಿ ನಡೆಯುವ ಘಟನೆಗಳು ಬಹುತೇಕ ಲೇಖಕರ ಮನೆಯ ಸುತ್ತಮುತ್ತಲ ವಾತಾವರಣದಲ್ಲಿಯೇ ನಡೆಯುತ್ತವೆ. ಇಲ್ಲಿ ಬರುವ ಪಾತ್ರಗಳು ಲೇಖಕರ ಸಮಕಾಲೀನರೇ ಆಗಿರುವುದನ್ನು ಕಾಣಬಹುದು. ಹೀಗಾಗಿ ನಿರೂಪಕ ನಿರೂಪಿಸುವ ವಿವರಗಳು ಲೇಖಕನದೂ ಆಗಿಬಿಡುತ್ತವೆ. ನಡೆಯುವ ಘಟನೆಳು ಲೇಖಕರಿಗೂ ಸಂಬಂಧಿಸಿಬಿಡುತ್ತವೆ. ಇನ್ನೂ ನೇರವಾಗಿ ಲೇಖಕರ ಕುಟುಂಬದ ಸದಸ್ಯರೂ ಕಾದಂಬರಿಯಲ್ಲಿ ಪ್ರವೇಶ ಮಾಡುತ್ತಾರೆ. ತೇಜಸ್ವಿ ಮಗಳು ಸುಸ್ಮಿತ ಹಾಗೂ ಹೆಂಡತಿ ರಾಜೇಶ್ವರಿ ಕಾದಂಬರಿಯಲ್ಲಿ ಮಿಂಚಿ ಮರೆಯಾಗುತ್ತಾರೆ. ಅವರ ಪ್ರೀತಿಯ ನಾಯಿ'ಮರಿ' ಕಾದಂಬರಿಯುದ್ದಕ್ಕೂ ಪ್ರಧಾನ ಪಾತ್ರ ವಹಿಸಿದೆ. ಹೀಗಾಗಿ ಲೇಖಕರು ತಮ್ಮ ಸುತ್ತಮುತ್ತಲ ವಾತಾವರಣದ ಸಮೀಕರಣದೊಂದಿಗೆ ತಮ್ಮ ಅನಭವಗಳನ್ನು ದಾಖಲಿಸುತ್ತಿದ್ದಾರೆಯೇ ಎನಿಸುತ್ತದೆ. ತೇಜಸ್ವಿಯವರ ವಿಶಿಷ್ಟತೆ ಇರುವುದೇ ಇಲ್ಲಿ. ಇವರು ಎಂದೋ ನಡೆಯುವ ಘಟನೆಗಳನ್ನು ಕಲ್ಪಿಸಿ ಬರೆಯುವವರೂ ಅಲ್ಲ; ಹಿಂದೆಂದೋ ನಡೆದ ಘಟನೆಗಳನ್ನು ಚಿತ್ರಿಸುವುದೂ ಇಲ್ಲ; ವರ್ತಮಾನದ ವಾಸ್ತವ ಬದುಕಿನ ವಿವರಗಳನ್ನು ಅತ್ಯಂತ ಸಹಜವಾಗಿ ಅದರ ಎಲ್ಲಾ ನೈಜತೆಯೊಂದಿಗೆ ವಿವರಿಸುವುದೇ ತೇಜಸ್ವಿ ಬರಹದ ವೈಶಿಷ್ಟ್ಯ. ಈ ಸಹಜತೆಯನ್ನು ಉಳಿಸಿಕೊಳ್ಳುವ ಸ್ಥಳೀಯ ಅಂಶಗಳಾಗಿ ಲೇಖಕರ ಸ್ವಂತ ವಿವರಗಳೂ ಸೇರಿಬಿಡುತ್ತವೆ. ಹೀಗಾಗಿ ಕಾದಂಬರಿಗೆ ಆತ್ಮಚರಿತ್ರೆಯ ಆಯಾಮವೂ ದಕ್ಕಿಬಿಡುತ್ತದೆ. ಒಮ್ಮೆ ತೇಜಸ್ವಿಗೆ ಅವರ ಆಪ್ತರಲ್ಲೊಬ್ಬರು 'ನೀವೂ ಒಂದು ಆತ್ಮಚರಿತ್ರೆ ಬರೀರಿ ಸಾರ್' ಎಂದು ಕೇಳಿದ್ದಕ್ಕೆ 'ಮಾಯಾಲೋಕವನ್ನೇ ನನ್ನ ಆತ್ಮಚರಿತ್ರೆ ಅಂತ ತಿಳ್ಕೊಳ್ರಯ್ಯಾ' ಎಂದಿದ್ದರು. ಅಪ್ಪಟ 'ಆತ್ಮಚರಿತ್ರೆ'ಯನ್ನು ನಿರೀಕ್ಷಿಸಲಾಗದೆ ಈಗ ಅದೇ ಅವರ

ಆತ್ಮಚರಿತ್ರೆ ಎಂದು ನೋಡಬೇಕಾದ ಅನಿವಾರ್ಯತೆ ಎದುರಾಗಿದ್ದು ಕನ್ನಡ ಸಾಹಿತ್ಯದ ದುರಂತವೇ ಸರಿ.

೫

ಮಾಯಾಲೋಕದಲ್ಲಿ ಬಯ್ಗುಳದ ಪದಗಳು ಬಹಳ ಸರಾಗವಾಗಿ ಹರಿದುಬರುತ್ತವೆ. ಇಲ್ಲಿನ ಎಲ್ಲ ಪಾತ್ರಗಳೂ ಬಯ್ಗುಳಗಳಿಂದಲೇ ಮಾತು ಆರಂಭಿಸುವ ಜಾಯಮಾನದವು. ಆದರೂ ಇವು ಬಯ್ಗುಳ ಅನ್ನಿಸುವುದೇ ಇಲ್ಲ. ಅವೂ ಕೂಡ ಕೇವಲ ಗ್ರಾಮಭಾಷೆಗಳು ಮಾತ್ರ ಅನ್ನುವಷ್ಟರ ಮಟ್ಟಿಗೆ ಕಾದಂಬರಿಯಲ್ಲಿ ಸಹಜವಾಗಿ ಸೇರಿಹೋಗಿವೆ. ಕಾದಂಬರಿಗೆ ಹಾಸ್ಯದ ನಿರೂಪಣೆಯನ್ನು ಒದಗಿಸಿರುವುದೇ ಈ ಬಯ್ಗುಳ. ಇಂಥ ಪದಗುಚ್ಛಗಳು ಮೂಡಿಗೆರೆ ಸುತ್ತಮುತ್ತಲ ಆಡುಭಾಷೆಯ ಸ್ವರೂಪವನ್ನು ಪರಿಚಯಿಸುತ್ತವೆ. ಕಾದಂಬರಿಯಲ್ಲಿ ಸಂಭಾಷಣಾ ಭಾಗವೇ ಅಧಿಕವಾಗಿರುವುದರಿಂದ ಎಲ್ಲ ಪಾತ್ರಗಳ ಸಂಭಾಷಣೆಯನ್ನು ಒಂದೆಡೆ ಸೇರಿಸಿ ಅಧ್ಯಯನ ನಡೆಸಿದರೆ ಚಿಕ್ಕಮಗಳೂರು ಜಿಲ್ಲೆಯ ಮೂಡಿಗೆರೆ ಭಾಗದ ಕನ್ನಡ ಭಾಷೆಯ ಸ್ವರೂಪವನ್ನು ಕಂಡುಕೊಳ್ಳಲು ಸಾಧ್ಯ. ಹೀಗಾಗಿ ಕಾದಂಬರಿಗೆ ಭಾಷಿಕ ಅಧ್ಯಯನದ ಆಯಾಮವೂ ದಕ್ಕಿದೆ ಎನ್ನಬಹುದು.

ಇಲ್ಲಿ ಬಳಕೆಯಾಗಿರುವ ಬಯ್ಗುಳದ ಪದಗಳು ಆ ಪ್ರದೇಶಕ್ಕೆ ಸಹಜವೋ ಇಲ್ಲವೋ ಎನ್ನುವ ವಿಚಾರದಲ್ಲಿ ನಾನು ಅಜ್ಞಾನಿ. ತೇಜಸ್ವಿಯವರನ್ನು ಅತ್ಯಂತ ಹತ್ತಿರದಿಂದ ಬಲ್ಲವರು ಅವರ ಬಗ್ಗೆ ವ್ಯಕ್ತಪಡಿಸಿರುವ ಬರಹಗಳಲ್ಲಿ ತೇಜಸ್ವಿ ಮಾತುಗಳನ್ನು ಕೋಟ್ ಮಾಡಿರುವುದನ್ನು ನೋಡಿದರೆ ಬಯ್ಗುಳ ರೂಪದ ಭಾಷೆ ತೇಜಸ್ವಿಗೆ ಸಹಜ ಭಾಷೆಯಾಗಿತ್ತು ಎಂಬುದು ವೇದ್ಯವಾಗುತ್ತದೆ. ಅಲ್ಲದೆ ನಾವು ಬಯ್ಗುಳ ಎನ್ನಬಹುದಾದ ಪದಗಳನ್ನು ಅವರು ಬಹಳ ಪ್ರೀತಿಯಿಂದ ಸಲುಗೆಯ ದ್ಯೋತಕವಾಗಿ ಬಳಸುವುದು ಕಂಡುಬರುತ್ತದೆ. ಈ ನಿಟ್ಟಿನಲ್ಲಿ ಯೋಚಿಸಿದರೆ ತೇಜಸ್ವಿ ವ್ಯಕ್ತಿತ್ವದ ಪ್ರಭಾವವೆ ಕಾದಂಬರಿಯಲ್ಲಿ ಬಯ್ಗುಳಗಳಾಗಿ ಹರಡಿಕೊಂಡಿರಬಹುದೇ ಎಂಬ ಗುಮಾನಿ ಉಂಟಾಗುವುದು ಸಹಜ. ಇಲ್ಲಿ ಬಳಕೆಯಾಗಿರುವ ಕೆಲವು ಬಯ್ಗುಳಗಳ ಸ್ಯಾಂಪಲ್‌ನೋಡಿ.

'ಕುಡುಕ ಸೋಳೇಮಗನೆ! ಸ್ವಲ್ಪ ನೀರು ಹೊರಾನ ಬಾರೋ ಅಂತ ಕರಕೊಂಡು ಬಂದರೆ ಕೊಡ ಕೆಳಗಿಟ್ಟು ನಿನ್ನ ಹರಿಕಥೆ ಶುರುಮಾಡಿದೆಯ?'

'.........ಸೂಳೇಮಕ್ಕಳ ಹೊಟ್ಟೆಗೆ ಕೊಳ್ಳಿ ಇಡಬೇಕು, ಮಾದರಚೋತ್ ಸೂಳೇಮಕ್ಕಳು'

'ಲೌಡಿಮಕ್ಕಳಿಗೆ ಪಂಚಾಯ್ತಿಗೆ ಹಾಕ್ಸಿ ಸರ್ಯಾದ ದಂಡ ಹಾಕಿಸಬೇಕು......'

'ಹುಚ್ಚುಮುಂಡೇಗಂಡ! ನಂಗೇನು ತಲೆ ಕೆಟ್ಟಿಲ್ಲ ನಿನ್ನ ಕಣ್ಣಿಗೆ ಬಟ್ಟೆ ಕಟ್ಟಿ ಚೌರ ಮಾಡಿಸಿಕೊಳ್ಳೋದಕ್ಕೆ .....'

'ಥೂ ಹುಚ್ಚುಮುಂಡೇಗಂಡ ಬ್ಯಾಡ ಕಣೋ ಕಾರ ಇದೆ ಅಂದರೂ ಕೇಳದೆ ಬಾಯಾಗಿ ಹಕ್ಕೊಂಡು ಅಗಿದಿದ್ದೀಯಲ್ಲಾ!'

ನಮ್ಮ ಗುಮಾನಿಯನ್ನು ಮತ್ತಷ್ಟು ಪೋಷಣೆ ಮಾಡುವುದು ನಿರೂಪಕರ ನಿರೂಪಣೆಯಲ್ಲೂ ಬಳಕೆಯಾಗಿರುವ ಬಯ್ಗುಳದ ಪದಗಳು.

'........ನಾನು ಹುಚ್ಚಾಪಟ್ಟೆ ಮಾತನಾಡಿ ಈ ಐನಾತಿ ಸೂಳೇಮಕ್ಕಳ ಬಲೆಗೆ ಬಿದ್ದರೆ ಕೆಟ್ಟೆ....

ಕೆಲವೆಡೆ ಮನಸ್ಸಿನಲ್ಲಿ ಮೂಡುವ ಮಾತುಗಳಲ್ಲೂ ತೇಜಸ್ವಿ ಬಯ್ಗುಳಗಳನ್ನು ಬೆರೆಸುತ್ತಾರೆ.
'ಬೇವಸ್ರೀ ಸೂಳೇಮಗನೆ ಸಣ್ಣಪ್ಪಗೌಡರ ಟಗರು ಕದ್ದೆ ಅಂತ ಇನ್ನೊಂದು ಸಾರಿ ಬೊಗಳಿದರೆ ಹಲ್ಲು ಮುರಿತೀನಿ ಎಂಬ ಬಯ್ಗುಳ ಅವನ ನಾಲಿಗೆ ಮೇಲಿದ್ದುದನ್ನು ಹಾಗೇ ನುಂಗಿಕೊಂಡು....'
ಎಂಬ ನಿರೂಪಕನ ವಿವರಣೆ ಮೇಲಿನ ಮಾತಿಗೆ ಉದಾಹರಣೆಯಾಗಿ ನಿಲ್ಲುತ್ತದೆ.

ಮತ್ತೊಂದು ರೀತಿಯಲ್ಲಿ ಯೋಚಿಸುವುದಾದರೆ ಕಾದಂಬರಿಗೆ ಸಹಜತೆ ಹಾಗೂ ಜೀವಂತಿಕೆ ತರುವ ಸಲುವಾಗಿ ಲೇಖಕರು ಬಯ್ಗುಳಗಳನ್ನು ಕಥನ ತಂತ್ರವಾಗಿ ಬಳಸಿರುವ ಸಾಧ್ಯತೆಯನ್ನೂ ತಳ್ಳಿ ಹಾಕುವಂತಿಲ್ಲ. ಇದೇ ಬಯ್ಗುಳಗಳಿಂದಾಗಿಯೇ ಕಾದಂಬರಿಗೆ ತಿಳಿಹಾಸ್ಯದ ಲೇಪ ಒದಗಿ ಬಂದಿರುವುದನ್ನು ಕಾಣಬಹುದು.

೬

ಕಾದಂಬರಿಯಲ್ಲಿ ಪಟ್ಟಣ ಪ್ರದೇಶದ ಪರಿಸರವನ್ನು ಚಿತ್ರಿಸುತ್ತಾ ಗೊಂದಲಗೇರಿ ಎಂಬ ಅರೆನಗರದ ವಾಸ್ತವ ಬದುಕನ್ನು, ಅಲ್ಲಿನ ಪುಡಿ ರಾಜಕೀಯಗಳನ್ನೂ ಸ್ಟ್ರೈಕು, ರಸ್ತೆತಡೆ, ವ್ಯಾಪಾರ-ವಹಿವಾಟು, ಜನ-ಜೀವನ ಮುಂತಾದ ಹತ್ತು ಹಲವು ಕೋನದಲ್ಲಿ ಗೊಂದಲಗೇರಿಯನ್ನು ತೇಜಸ್ವಿ ಚಿತ್ರಿಸುತ್ತಾರೆ. ಇಲ್ಲಿ ಗೊಂದಲಗೇರಿ ಎಂಬ ಊರು ವಾಸ್ತವದಲ್ಲಿ ಇದೆಯೋ ಇಲ್ಲವೋ ಎಂಬ ಪ್ರಶ್ನೆ ಮುಖ್ಯವಲ್ಲ ಎಂಬುದನ್ನು ಮರೆತು ಯೋಚಿಸಿದಾಗ ಗೊಂದಲಗೇರಿ ಎಂಬ ಹೆಸರು ಲೇಖಕರೇ ಅಲ್ಲಿನ ಪರಿಸರಕ್ಕೆ ಹೊಂದುವ ಹಾಗೆ ಸೃಷ್ಟಿಸಿರುವ ರೂಪಕದಂತೆ ಕಾಣುತ್ತದೆ. ಇಡೀ ಮಾಯಾಲೋಕವೇ ಒಂದು ರೀತಿಯ ಗೊಂದಲಗೇರಿ ಎಂಬ ಧ್ವನಿಯೂ ಇರಬಹುದು. ಒಟ್ಟಿನಲ್ಲಿ ತೇಜಸ್ವಿ ಪ್ರತಿ ಪಾತ್ರ ಮತ್ತು ಸನ್ನಿವೇಶಗಳನ್ನು ಚಿತ್ರಿಸುವಾಗಲೂ ಒಂದು ಎಚ್ಚರದ ಸ್ಥಿತಿಯಲ್ಲಿ ಕಾದಂಬರಿಯ ಲಯ ಸಾಧಿಸಿರುವುದು ಕಂಡುಬರುತ್ತದೆ.

ಕೆಲವು ಕಡೆ ಇಲ್ಲಿ ದೀರ್ಘ ವಿವರಣೆ ಇರುತ್ತದೆ ಅಥವಾ ಇರಬೇಕು ಎಂದು ಓದುಗರು ನಿರೀಕ್ಷಿಸುವ ಹಂತದಲ್ಲಿ ಅದನ್ನು ಹೆಚ್ಚು ವಿವರಿಸಲು ಹೋಗದೆ ಕ್ವಚಿತ್ತಾಗಿ ತಿಳಿಸಿ ವಿವರಿಸದೆ ಬಿಟ್ಟು ಬಿಡುವ ಹಲವು ಪ್ರಸಂಗಗಳು ಕಾದಂಬರಿಯಲ್ಲಿ ಬರುತ್ತವೆ. ಹೀಗೆ ಆ ಸನ್ನಿವೇಶಗಳನ್ನು ಹಿಂಜಿ ಹಿಂಜಿ ಅದರ ಸ್ವಾದವನ್ನು ಕೆಡಿಸುವುದಕ್ಕಿಂತ ವಿವರಿಸದೆಯೇ ಓದುಗರ ಯೋಚನಾಲಹರಿಗೆ ಒಪ್ಪಿಸಿಬಿಡುವುದು ಆ ಮೂಲಕ ಆ ಸವಿಯನ್ನು ಅವರವರ ಅಭಿರುಚಿಗೆ ತಕ್ಕಂತೆ ಅನುಭವಿಸುವ ಅವಕಾಶವನ್ನು ಒದಗಿಸುವುದು ತೇಜಸ್ವಿ ತಂತ್ರಗಾರಿಕೆಯಾಗಿ ಕಂಡುಬರುತ್ತದೆ. ಉದಾಹರಣೆಗೆ ಕಾರಿಕಾಯಿ ಜಜ್ಜಿ ಕವಡಿ ಮೀನು ಹಿಡಿಯುವ ಘಟನೆ ಕಾದಂಬರಿಯಲ್ಲಿ ಮಹತ್ತದ ಘಟನೆಯಾಗಿ ದಾಖಲಾಗಿದ್ದರೂ ಮೀನು ಹಿಡಿಯುವ ಪ್ರಕ್ರಿಯೆಯನ್ನು ಮಾತ್ರ ಲೇಖಕರು ವಿವರಿಸುವುದೇ ಇಲ್ಲ. ಇಲ್ಲಿ ಮೀನು ಹಿಡಿಯುವ ಕ್ರಿಯೆಯನ್ನು ಏಕೆ ಸಸ್ಪೆನ್ಸ್ ಆಗಿ ಇಡುತ್ತಾರೆ ಎಂಬುದು ಅಚ್ಚರಿ ಹುಟ್ಟಿಸುತ್ತದೆ. ಆಶ್ಚರ್ಯಪಡುವುದಕ್ಕೆ ಮತ್ತೊಂದು ಕಾರಣವೂ ಇದೆ. ತೇಜಸ್ವಿಗೆ ಹವ್ಯಾಸವಾಗಿ ಹೋಗಿದ್ದ ಮೀನು ಹಿಡಿಯುವ ಕೆಲಸ ಅವರಿಗೆ ಅತಿ ಹೆಚ್ಚು ಆನಂದ ನೀಡುತ್ತಿದ್ದ ಕ್ರಿಯೆಯಾಗಿತ್ತು. ಮೀನು ಹಿಡಿಯುವುದರಲ್ಲಿ ಅವರು ಜಗತ್ತನ್ನೇ ಮರೆಯುತ್ತಿದ್ದರು. ಯಾವುದೇ ಕವಿ ಅಥವಾ ಲೇಖಕ ತನಗೆ ಹೆಚ್ಚು ಪ್ರಿಯವಾದ ಅಂಶವನ್ನು

ಮೈಮರೆತು ವರ್ಣಿಸುವುದಕ್ಕೆ ಕನ್ನಡ ಸಾಹಿತ್ಯದಲ್ಲಿ ಹಲವು ಉದಾಹರಣೆಗಳಿವೆ. ಬನವಾಸಿಯನ್ನು ವರ್ಣಿಸುವಾಗ ಪಂಪ ಮೈಮರೆಯುತ್ತಿದ್ದಂತೆ, ಭಕ್ತಿರಸವನ್ನು ವರ್ಣಿಸುವಾಗ ಹರಿಹರ ಮೈಮರೆಯುತ್ತಿದ್ದಂತೆ, ಪ್ರಕೃತಿಯನ್ನು ವರ್ಣಿಸುವಾಗ ಕುವೆಂಪು ಮೈಮರೆಯುತ್ತಿದ್ದಂತೆ, ತೇಜಸ್ವಿ ಕೂಡ ತಮಗಿಷ್ಟವಾದ ಕಾಡು-ಮೇಡು, ಮೀನು ಹಿಡಿಯುವುದು, ಬೇಟೆ ಇವುಗಳನ್ನು ಮೈಮರೆತು ವರ್ಣಿಸುತ್ತಾರೆ ಎಂಬುದು ಓದುಗರ ನಿರೀಕ್ಷೆ. ಹೀಗಿರುವಾಗ ಇಲ್ಲಿ ತೇಜಸ್ವಿ ಮೀನು ಹಿಡಿಯುವುದನ್ನು ವಿವರಿಸದೇ ಹೋಗಲು ಸಾಧ್ಯವಿಲ್ಲ. ಆದರೆ ಈ ನಿರೀಕ್ಷೆಯನ್ನೂ ಹುಸಿಯಾಗಿಸಿ ಲೇಖಕರು ಆ ಘಟನೆಯನ್ನು ಕೇವಲ 'ಕಳ್ಳ ಸೂಳೇಮಕ್ಕಳು ಕಾರೆಕಾಯಿ ಜಜ್ಜಿ ಮೀನು ಹಿಡಿದಿದ್ದಾರೆಂದು' ದಾಖಲಿಸಿದ ಲೇಖಕರ ಉದ್ದೇಶವನ್ನು ನೋಡಿದರೆ ಇದು ತೇಜಸ್ವಿ ಪ್ರಜ್ಞಾಪೂರ್ವಕವಾಗಿ ಕೈಬಿಟ್ಟಿರುವ ಸನ್ನಿವೇಶ ಎನ್ನುವುದು ಮನವರಿಕೆಯಾಗುತ್ತದೆ. ಇದನ್ನು ಗಮನದಲ್ಲಿಟ್ಟುಕೊಂಡು ನೋಡಿದರೆ ತೇಜಸ್ವಿ ಕಾದಂಬರಿಯ ಒಟ್ಟು ವಿನ್ಯಾಸವನ್ನು ಬಹಳ ಎಚ್ಚರಿಕೆಯಿಂದಲೇ ನೇಯ್ದಿದ್ದಾರೆಂಬುದು ಗೊತ್ತಾಗುತ್ತದೆ.

೭

ತೇಜಸ್ವಿಯವರ ಮೂಲ ಗುಣ 'ಅನ್ವೇಷಣೆ' ಎಂಬುದು ಎಲ್ಲ ವಿಮರ್ಶಕರೂ ಗುರ್ತಿಸಿರುವ ಸತ್ಯ. ಅವರ ಈ ಅನ್ವೇಷಕ ಪ್ರವೃತ್ತಿ ಅವರ ಕಥನಗಳಿಂದ ಕಾದಂಬರಿಗಳನ್ನು ಒಳಗೊಂಡು ಮಾಯಾಲೋಕದಲ್ಲೂ ಮುಂದುವರಿದಿರುವುದನ್ನು ಕಾಣಬಹುದು. ಈ ಅನ್ವೇಷಣಾ ಮಾದರಿಯೂ ತೇಜಸ್ವಿಯವರ ಕಾದಂಬರಿಯಲ್ಲಿ ಅಭಿವ್ಯಕ್ತಿ ತಂತ್ರವಾಗಿ ಬಳಕೆಯಾಗಿರುವುದು ಗಮನಕ್ಕೆ ಬರುತ್ತದೆ. ಇದು ಕೇವಲ ಅಭಿವ್ಯಕ್ತಿ ತಂತ್ರ ಮಾತ್ರವಲ್ಲ, ಬದುಕನ್ನು ಶೋಧಿಸುವ ತೇಜಸ್ವಿ ಧೋರಣೆಗೆ ಪೂರಕವಾಗಿ ಅವರ ಕಾದಂಬರಿಯ ಮೂಲ ದ್ರವ್ಯವೂ ಹೌದು. "ಇಕ್ಬಾಲ್‌ಸಾಬಿಯೂ ಕಮರಿಶೆಟ್ಟಿಯೂ ಹಳ್ಳಿಯಿಂದ ಸಾಕಷ್ಟು ದೂರ ಇದ್ದ ಹಳ್ಳದ ತಡಿಗೆ ಇಳಿದು ಒಂದು ಬಾವಿಯ ಒಳಗೆ ಹಿಣುಕಿ ನೋಡಿದಾಗ ಒಳಗೆ ಸತ್ತು ಬಿದ್ದಿರುವುದು ಏನೂ ಕಾಣಲಿಲ್ಲ. ಆದರೆ ಹಳ್ಳದ ನೀರೇ ಕೊಂಚ ವಾಸನೆ ಇದೆ ಎನ್ನಿಸಿತು. ಹಾಗಿದ್ದರೆ ಯಾವುದಾದರೂ ಮುದಿ ಎತ್ತೋ ನಾಯಿಯೋ ಹಳ್ಳದ ಬದಿ ಬಿದ್ದು ಸತ್ತಿರಬಹುದೇನೋ ಎಂದು ಶಂಕಿಸಿ ಅವರಿಬ್ಬರೂ ಹಳ್ಳದ ದಂಡೆಯಲ್ಲೇ ಕೊಂಚದೂರ ನಡೆಯುತ್ತಾ ಮುಂದುವರಿದರು. ಸ್ವಲ್ಪ ದೂರ ಬರುವುದರೊಳಗೆ ಕೆಲವಾರು ಗಿಡುಗಗಳು ಹಳ್ಳದ ಮೇಲೆ ಹಾರಾಡುತ್ತಾ ಇರುವುದು ಕಾಣಿಸಿತು. ಹಾಗಿದ್ದರೆ ಎಂಥದೋ ಅಲ್ಲಿ ಸತ್ತಿರಬೇಕು ಎಂದು ಸಂಶಯದಿಂದ ಇಕ್ಬಾಲ್‌ಸಾಬಿ ಅತ್ತ ಕಾಲು ಹಾಕಿದ. ಹಳ್ಳದ ದಂಡೆಯಲ್ಲಿ ಎಂಥದೂ ಸತ್ತಿರಲಿಲ್ಲ. ಆದರೆ ಹದ್ದುಗಳ ಹಾರಾಟಕ್ಕೂ ನೀರು ತೆಳ್ಳಗೆ ವಾಸನೆ ಬರುತ್ತಿರುವುದಕ್ಕೂ ಕಾರಣ ಇಬ್ಬರಿಗೂ ಕೂಡಲೇ ಹೊಳೆಯಿತು. ಇಬ್ಬರೂ ಒಟ್ಟಿಗೆ 'ಕಳ್ಳಸೂಳೇ ಮಕ್ಳ' ಎಂದು ಉದ್ಗರಿಸಿ ಆಘಾತವಾದವರಂತೆ ಮರಳು ದಿಣ್ಣೆಯ ಮೇಲೆ ನಿಂತುಬಿಟ್ಟರು. ಯಾರೋ ಗುಂಡಿಗಳಿಗೆಲ್ಲ ಕಾರೆಕಾಯಿ ಜಜ್ಜಿ ಕದಡಿ ಆ ಗುಂಡಿಯಲ್ಲಿದ್ದ ಮೀನನ್ನೆಲ್ಲ ಹಿಡಿದುಹಾಕಿದ್ದರು." (ಮಾಯಾಲೋಕ-೧, ಪುಟ-೧೪, ಪ್ರ. ಪುಸ್ತಕ ಪ್ರಕಾಶನ, ಎರಡನೆ ಮುದ್ರಣ-೨೦೦೬, ಲೇ. ಕೆ.ಪಿ.ಪೂರ್ಣಚಂದ್ರ ತೇಜಸ್ವಿ)

ಮೇಲಿನ ಭಾಗವನ್ನು ಗಮನಿಸಿದರೆ ಕಾರೆಕಾಯಿ ಜಜ್ಜಿ ಕದಡಿ ಗುಂಡಿಗಳಲ್ಲಿ ಮೀನು ಹಿಡಿದಿರುವುದನ್ನು ಹೇಳುವುದು ಲೇಖಕರ ಉದ್ದೇಶ, ಆದರೆ ಅದನ್ನು ನೇರವಾಗಿ ಹೇಳುವುದಿಲ್ಲ.

ಹಳ್ಳದ ನೀರಿನ ವಾಸನೆಯ ಜಾಡು ಹಿಡಿದು ಕರೆತಂದು ಅಲ್ಲಿ ಆಕಾಶದಲ್ಲಿ ಹಾರಾಡುವ ಹದ್ದುಗಳನ್ನು ತೋರಿಸಿ ಕೊನೆಗೆ ಗುಂಡಿಯಲ್ಲಿ ಮೀನುಗಳು ಸತ್ತು ಬಿದ್ದಿರುವುದನ್ನು ಹೇಳಿ ಕಾರೆಕಾಯಿ ಜಜ್ಜಿ ಕದಡಿ ಮೀನು ಹಿಡಿದಿರುವುದನ್ನು ಹೇಳುತ್ತಾರೆ. ಯಾವುದೇ ಘಟನೆಯನ್ನು ನೇರವಾಗಿ ಹೇಳದೆ ಸುಳಿವಿನ ಜಾಡು ಹಿಡಿದು ಓದುಗರನ್ನು ಕರೆತರುವ, ಆ ಮೂಲಕ ಮುಂದೇನು ಎಂಬ ಕುತೂಹಲವನ್ನು ಓದುಗರಲ್ಲಿ ಮೂಡಿಸುವ ಪತ್ತೇದಾರಿಕೆಗುಣ ತೇಜಸ್ವಿಗೆ ದತ್ತವಾಗಿದೆ. ಹಾಗಾಗಿಯೇ ಅವರ ಕಾದಂಬರಿಯ ವಿವರಗಳು ಘಟನೆಗೆ ನೇರವಾಗಿ ಸಂಬಂಧಿಸಿರದೆ ಸುಳಿವಿನ ಜಾಡು ಹಿಡಿದು ಕೇಂದ್ರಕ್ಕೆ ಸಂಪರ್ಕ ಕಲ್ಪಿಸುತ್ತವೆ. ತೇಜಸ್ವಿ ಬರಹದಲ್ಲಿರುವ ಈ ವಿಶಿಷ್ಟ ಗುಣವೇ ಮುಖ್ಯವಾಗಿ ಬಹುಸಂಖ್ಯೆಯ ಓದುಗರನ್ನು ಅವರತ್ತ ಸೆಳೆದಿದೆ ಎಂದರೆ ತಪ್ಪಾಗಲಾರದು.

ಕಾದಂಬರಿಯ ಮಾಯಾಲೋಕ ಎಂಬ ಶೀರ್ಷಿಕೆಯನ್ನು ಗಮನಿಸಿದರೆ ವಿವಿಧ ಅರ್ಥಗಳು ಹೊಳೆಯುತ್ತವೆ, ಪ್ರಕೃತಿ ಮುನಿಸಿಕೊಂಡರೆ ಎಡಬಿಡಂಗಿತನದ ಈ ಮನುಷ್ಯ ಲೋಕವೇ ಮಾಯವಾಗುವುದು ಎಂಬರ್ಥದಲ್ಲಿ ಇದೊಂದು ಮಾಯಾಲೋಕವಾದರೆ, ಏನೇನೋ ಅವಾಸ್ತವ, ಪ್ರಕೃತಿಗೆ ವಿರುದ್ಧವಾದ ಘಟನೆ ವಿದ್ಯಾಮಾನಗಳು ನಡೆಯುವ ವಿಚಿತ್ರ ಲೋಕವೇ ಈ ಮಾಯಾಲೋಕ ಎಂಬುದು ಇದರ ಮತ್ತೊಂದು ಅರ್ಥ. ಮಾಯಾಲೋಕದ ಸರಣಿಗಳನ್ನೆ ಬರೆಯಲು ಯೋಚನೆ ರೂಪಿಸಿದ್ದ, ಅದಕ್ಕೆ ಬೇಕಾದ ಚೌಕಟ್ಟನ್ನು, ಕಥಾ ಹಂದರವನ್ನು ನಿರ್ಮಿಸಿಕೊಂಡಿದ್ದ ಲೇಖಕರಿಗೆ ಒಂದು ಬೃಹತ್ ಮಹತ್ ಕಾವ್ಯ ಸರಣಿಯ ಭಾರವನ್ನು ತಡೆಯಬಲ್ಲ ಹಾಗೂ ವಿವಿಧ ಅರ್ಥಗಳನ್ನು ಸ್ಫುರಿಸುವ ಬಗೆಯಲ್ಲೂ ಲೇಖಕರು ಮಾಯಾಲೋಕ ಎಂಬ ಶೀರ್ಷಿಕೆಯನ್ನು ಬಳಸಿಕೊಂಡಿರಬಹುದು.

*****

# ಅಧ್ಯಾಯ: ೩

# ಮಾಯಾಲೋಕದ ವಿನ್ಯಾಸ

ಮಾಯಾಲೋಕ ಪ್ರಧಾನ ವಸ್ತು, ನಾಯಕ, ಖಳನಾಯಕ ಎಂಬಂಥ ಕಾದಂಬರಿ ಚೌಕಟ್ಟುಗಳನ್ನು ಮುರಿದು ತನ್ನದೇ ಆದ ಹೊಸ ವಿನ್ಯಾಸವನ್ನು ರೂಪಿಸಿಕೊಂಡಿದೆ. ಹೀಗಾಗಿ ಕಾದಂಬರಿ ಎಲಿಮೆಂಟ್‌ಗಳನ್ನು ಇಲ್ಲಿ ಅರಸುವುದು ಉಪಯೋಗಕ್ಕೆ ಬರುವುದಿಲ್ಲ. ಆದರೆ ಅದೇ ಹಿನ್ನೆಲೆಯಲ್ಲಿ ನೋಡಲು ಸಾಧ್ಯವಿರುವುದರಿಂದ ಇಲ್ಲಿ ಅಂಥದ್ದೊಂದು ಪ್ರಯತ್ನ ನಡೆಸಲಾಗಿದೆ.

೧

ಮಾಯಾಲೋಕದ ವಿನ್ಯಾಸವನ್ನು ಪರಿಶೀಲಿಸುವ ಮೊದಲು ಕಾದಂಬರಿಯೊಂದರ ಸಾಮಾನ್ಯ ಲಕ್ಷಣಗಳನ್ನು ಗಮನಿಸುವುದು ಅಗತ್ಯವೆನಿಸುತ್ತದೆ. ಕಾದಂಬರಿಗಳನ್ನು ಅದರ ವಸ್ತುವಿಗನುಗುಣವಾಗಿ ಐತಿಹಾಸಿಕ ಕಾದಂಬರಿ, ಸಾಮಾಜಿಕ ಕಾದಂಬರಿ ಎಂಬುದಾಗಿ ಎರಡು ಪ್ರಧಾನ ಗುಂಪುಗಳಾಗಿ ಗುರ್ತಿಸಬಹುದು. ಆದರೆ ಮಾಯಾಲೋಕ ಚಾರಿತ್ರಿಕ ವಸ್ತುವಿನಿಂದ ದೂರ ಉಳಿದಿರುವುದರಿಂದ ಚಾರಿತ್ರಿಕ ಕಾದಂಬರಿಯೂ ಆಗಿಲ್ಲ. ಸಾಮಾಜಿಕ ಸಮಸ್ಯೆಯನ್ನು ತನ್ನ ಮುಖ್ಯ ವಸ್ತುವಾಗಿಸಿಕೊಂಡಿಲ್ಲವಾದ್ದರಿಂದ ಸಾಮಾಜಿಕ ಕಾದಂಬರಿಯೂ ಆಗಿಲ್ಲ. ಇದೊಂದು ಪರಿಸರದ ಮಹಾಕಥನವಾದರೂ ಇದು ಕೇವಲ ಭೌತಿಕ ಪರಿಸರವಲ್ಲ. ಮಾನವ ಪರಿಸರ, ಜೈವಿಕ ಪರಿಸರವನ್ನೂ ಒಳಗೊಂಡಂತೆ ಪ್ರಾಕೃತಿಕ ಪರಿಸರವನ್ನೊಳಗೊಂಡಿರುವ ಒಂದು ಮಿಶ್ರ ಕಥನ. ಮೊದಲಿಗೆ ಕಾದಂಬರಿ ಎಂಬ ವಿಭಾಗ ಕ್ರಮದಿಂದಲೇ ಹೊರಗುಳಿಯುವ ಮಾಯಾಲೋಕ, ಎಲ್ಲ ಹಂತದಲ್ಲೂ ತನ್ನದೇ ನಡೆಯನ್ನು ರೂಪಿಸಿಕೊಂಡಿರುವುದನ್ನು ಗುರ್ತಿಸಬಹುದು.

ಇನ್ನು ವಸ್ತುವಿನ ವಿಚಾರಕ್ಕೆ ಬರುವುದಾದರೆ, ಮಾಯಾಲೋಕಕ್ಕೆ ಒಂದು ಮುಖ್ಯ ವಸ್ತು ಎನ್ನುವುದೇ ಇಲ್ಲ. ವಿಭಿನ್ನ ಆಶಯಗಳನ್ನು ಒಳಗೊಂಡ ಕಾದಂಬರಿಯೊಂದು ಒಂದು ವಸ್ತುವನ್ನು ಪ್ರಧಾನವಾಗಿಟ್ಟುಕೊಳ್ಳಲೂ ಸಾಧ್ಯವಿಲ್ಲ. ಜೌಗು ಮತ್ತು ಜೌಗಿಗೆ ಸಂಬಂಧಿಸಿದ ವಿವರಗಳು, ಜೌಗನ್ನು ಸಂಪರ್ಕಿಸಿಕೊಂಡೇ ಕಾದಂಬರಿ ಬೆಳೆಯುವ ಕ್ರಮ, ಅಲ್ಲಿನ ಹಕ್ಕಿ ಪಕ್ಷಿಗಳು, ಭಯಂಕರ ಮಳೆ, ಅದು ಉಂಟು ಮಾಡುವ ಅಲ್ಲೋಲ ಕಲ್ಲೋಲ, ಬರಗಾಲ, ಅದರಿಂದ ಏಲಕ್ಕಿ ಮತ್ತು ಕಾಫಿ ತೋಟಕ್ಕೆ ಬಂದೊದಗಿದ ಸ್ಥಿತಿ, ಮಲೆನಾಡಿನ ಅತಿರೇಕ, ಹಕ್ಕಿಮರಿ, ಏಡಿ–ಹೀಗೆ ಕಾದಂಬರಿಯ ಉದ್ದಕ್ಕೂ ಬರುವ ಈ ವಿವರಗಳು ಇದು ಪರಿಸರ ಮತ್ತು ಅದರ ಬದಲಾವಣೆಗಳನ್ನು ಚಿತ್ರಿಸುವ ಕಾದಂಬರಿ ಎನಿಸುವಂತೆ ಮಾಡುತ್ತವೆ. ಹಾಗಾಗಿ ಇಲ್ಲಿ ಪರಿಸರದ ಕಾಳಜಿಯೇ ಮೇಲ್ಪಂಕ್ತಿಯಲ್ಲಿ ನಿಲ್ಲುತ್ತದೆ.

ಇನ್ನೊಂದು ಸಂದರ್ಭದಲ್ಲಿ ಅಣ್ಣಪ್ಪಣ್ಣ, ಕರಾಟೆಮಂಜ, ಜಗ್ಗಣ್ಣ–ಇವರು ಮೆಣಸಿನ ಮಡಿ ಹಾಕಿ ಅದನ್ನು ಉಳಿಸಿಕೊಳ್ಳಲು ನಡೆಸುವ ಹೋರಾಟ, ಇದೇ ಕಾರಣಕ್ಕೆ ಮಕ್ಕಿಗದ್ದೆಯವರೊಂದಿಗೆ ಅವರು ನಡೆಸುವ ಜಗಳ, ಅಬ್ಬೂಸ್‌ಬೇರಿ ಕೊಟ್ಟ ಹಳೆ ಡಕೋಟ ವಿಕ್ಕಿ ಮೊಪೆಡ್ ಒಂದನ್ನು ಕಲಿಯಲು ಊರೆಲ್ಲಾ ವಿಮಾನದಂತೆ ಸದ್ದು ಮಾಡುತ್ತಾ ತಿರುಗುವ ಅವರ ಹುಡುಗಾಟ, ಬಕೇಟುಗಟ್ಟಲೆ ಏಡಿಗಳನ್ನು ಹಿಡಿದು ಅದನ್ನು ಚಪ್ಪರಿಸಿಕೊಂಡು ತಿನ್ನಬೇಕೆಂದು ಹವಣಿಸುತ್ತಿರಬೇಕಾದರೆ ನಿರೂಪಕನ ಸಲಹೆಯಿಂದ ತಿನ್ನುವುದೋ ಬೇಡವೋ ಎಂಬ ಜಿಜ್ಞಾಸೆಯಲ್ಲಿ, ಅಂತಿಮವಾಗಿ ನೀರಿಗೆ ಚೆಲ್ಲಿ ನಿರಾಸೆಯಿಂದ ನಡೆಯುವ, ಹಂದಿ ಬೇಟೆಗೆಂದು ಕಾಡಿಗೆ ಹೋಗಿ ಶಿಕಾರಿ ನಡೆಸಿದಾಗ ಬಾಯಮ್ಮ ಅದು ತನ್ನ ಸಾಕು ಹಂದಿ ಎಂದು ಅವರೊಂದಿಗೆ ಜಗಳ ನಡೆಸುವ, ಕೊನೆಗೆ ಹಂದಿ ಕಾಡಿಗೆ ಪರಾರಿಯಾಗುವುದರೊಂದಿಗೆ ಹೊಡೆದ ಶಿಕಾರಿ ಇಲ್ಲವಾಗುವ, ಕರಾಟೆ ಮಂಜ ಅವನ ಕರಾಟೆ ಹೊಡೆತ, ವರದಿಗಾರಿಕೆ, ಫೋಟೋಗ್ರಾಫರ್ ವೃತ್ತಿ, ಅಣ್ಣಪ್ಪಣ್ಣ ಅವನ ಕುತಂತ್ರ, ಭಂಡಾರಿ ಬಾಬು ಅವನ ಕ್ಷೌರವೃತ್ತಿ, ಕ್ಷೌರದ ಅಂಗಡಿ ತೆರೆಯಲು ಹೋದಾಗ ಅವರಿವರ ಸಲಹೆ–ಎಚ್ಚರಿಕೆಗಳಿಂದ ಗಲಿಬಿಲಿಗೊಂಡು ಕೊನೆಗೆ ತನಗೆ ತೋಚಿದ ಕಡೆ ಅಂಗಡಿ ತೆರೆಯುವ, ಜಗ್ಗಣ್ಣ ಮತ್ತು ಅವನ ಹೆಂಡತಿಯೊಂದಿಗಿನ ಜಗಳ–ಹೀಗೆ ಈ ಮೂವರ ಹುಡುಗಾಟ, ಪರದಾಟಗಳೇ ಕಾದಂಬರಿಯುದ್ದಕ್ಕೂ ಬರುವುದನ್ನು ನೋಡಿದರೆ ಮೂರು ಅತಂತ್ರ ಬದುಕುಗಳನ್ನು ಅದರ ಬದುಕಿನ ಹೋರಾಟಗಳ ಹಿನ್ನೆಲೆಯಲ್ಲಿ ಕಾದಂಬರಿ ಚಿತ್ರಿಸುತ್ತಿದೆ ಎನಿಸಿಬಿಡುತ್ತದೆ. ಈ ಸಂದರ್ಭದಲ್ಲಿ ಇವರೇ ಕಾದಂಬರಿಯ ಕೇಂದ್ರ ಅನಿಸದೇ ಇರುವುದಿಲ್ಲ. ಈ ಹಂತದಲ್ಲಿ ಮಾಯಾಲೋಕ ಈ ತರಲೆ ಹುಡುಗರ ತರಲೆ ಆಟಗಳನ್ನು ಚಿತ್ರಿಸುವ ಒಂದು ಸರಳ ಕಾದಂಬರಿ ಎಂದು ಅನಿಸಿಬಿಡುವ ಅಪಾಯವೂ ಎದುರಾಗುತ್ತದೆ. ಕಾದಂಬರಿಯನ್ನು ಸೂಕ್ಷ್ಮವಾಗಿ ನೋಡುತ್ತಾ ಹೋದಂತೆ ಆ ಯೋಚನೆಯೇ ಶುದ್ಧ ತರಲೆ ಎನಿಸಿಬಿಡುತ್ತದೆ.

ಗೊಂದಲಗೇರಿಯ ಪುಡಿ ರಾಜಕೀಯ ಮತ್ತು ಪ್ರಕಾಶವಾಣಿ ಪ್ರವೇಶ ಮಾಡಿ ಕಾದಂಬರಿಯ ನಡೆಯನ್ನು ಮತ್ತೊಂದು ಕಡೆ ಕರೆದೊಯ್ಯುತ್ತವೆ. ರೈತಸಂಘ, ಅದರ ರಸ್ತೆ ರೋಖೋ ಚಳುವಳಿ, ಎಂಎಲ್‌ಎ ಮಾರಪ್ಪ ಮತ್ತು ಟಿಬಿ ಗಲಾಟೆ, ವಿದ್ಯುತ್ ಇಲಾಖೆ ಕಾರ್ಮಿಕರ ಪ್ರತಿಭಟನೆ, ಥೆಲ್ಪಿಯ ಪ್ರವೇಶ ಮತ್ತು ಪ್ರಕಾಶವಾಣಿಯನ್ನು ಉಳಿಸಲು ಅವನು ನೀಡುವ ಅಮೂಲ್ಯ ಸಲಹೆಗಳು–ಇವೆಲ್ಲ ಕಾದಂಬರಿಗೆ ಹೊಸ ಆಯಾಮವನ್ನು ದಕ್ಕಿಸಿಕೊಡುತ್ತವೆ. ಇಲ್ಲಿ ಕಾದಂಬರಿ ಮಾಧ್ಯಮಗಳು, ಸಂಘಟನೆಗಳು, ಚಳುವಳಿ ಎಂದು ತೀರಾ ಸಾಮಾಜಿಕವಾಗಿಬಿಡುತ್ತದೆ. ಈ ಹಂತದಲ್ಲಿ ಮಾಯಾಲೋಕ ಸಾಮಾಜಿಕ ತಲ್ಲಣಗಳನ್ನು ಅದರ ಎಲ್ಲ ಆಯಾಮಗಳಲ್ಲಿ ಕಟ್ಟಿಕೊಡುವ ಕಾದಂಬರಿ ಎನಿಸಿಬಿಡುತ್ತದೆ.

ಇದು ಮಾಯಾಲೋಕದ ಕೇಂದ್ರ, ಇದು ಇದರ ನಡೆ, ಇಲ್ಲಿನ ಆಶಯ–ಕಾಳಜಿಗಳು ಇವು ಎಂದು ನಿರ್ಧರಿಸುತ್ತಿರುವಾಗಲೇ ಒಂದೊಂದು ಹಂತದಲ್ಲೂ ವಿಭಿನ್ನ ನಡೆಯನ್ನು ಕಂಡುಕೊಳ್ಳುತ್ತಾ ತನ್ನ ಕಾಳಜಿಗಳನ್ನು ಬದಲಾಯಿಸಿಕೊಳ್ಳುತ್ತಾ, ಕೇಂದ್ರಗಳನ್ನು ಒಡೆಯುತ್ತಾ ಕಾದಂಬರಿ ಸಾಗುತ್ತದೆ. ಚಿತ್ರಗಳನ್ನು ಮೊದಲಭಾರಿಗೆ ಬಳಸುವುದರೊಂದಿಗೆ ಹೊಸದೊಂದು ಅಭಿವ್ಯಕ್ತಿಯನ್ನು ಕಂಡುಕೊಂಡಿದೆ.

ಭಾಷೆ ತನ್ನ ದೇಸಿಯ ಸೊಗಡಿನೊಂದಿಗೆ ಮುದ ನೀಡುವಂತಿದೆ. ಈ ಸೊಗಡಿಗೆ ಸಹಜವಾಗೇ ಬರುವ ಬಯ್ಗುಳ ಕಾದಂಬರಿಗೆ ಹಾಸ್ಯದ ಲೇಪವನ್ನು ಹಚ್ಚುತ್ತವೆ. ಇಲ್ಲಿನ ವಿನ್ಯಾಸ ಒಟ್ಟು ಕಥಾನಕವನ್ನು ಬಿಡಿ ಬಿಡಿ ಚಿತ್ರಗಳಂತೆ ನಮ್ಮ ಮುಂದಿಡುತ್ತದೆ. ಸಂಪರ್ಕ ಸಾಧಿಸಿಕೊಂಡು ಓದುತ್ತಿರುವಾಗಲೇ ಬೇರೊಂದು ಚಿತ್ರ ಮತ್ತೊಂದು ಎದುರಾಗಿ ಹಿಂದಿನ ಸಂಪರ್ಕ ಕಡಿದು ಹೋದಂತೆನಿಸುತ್ತದೆ. ಆದರೆ ಆಂತರ್ಯದಲ್ಲಿ ಎಲ್ಲಾ ಚಿತ್ರಗಳಿಗೂ ಸಂಪರ್ಕವಿರಿಸಿಕೊಂಡೇ ಮುಂದುವರಿಯುವಂತೆ ಕಾದಂಬರಿಯ ವಿನ್ಯಾಸವಿದೆ. ಮಾಯಾಲೋಕಕ್ಕೆ ಒಂದು ವಸ್ತು, ಕಥನದಲ್ಲಿ ಒಂದು ಕೇಂದ್ರ, ಒಬ್ಬ ನಾಯಕ, ಒಬ್ಬ ಖಳನಾಯಕ ಎಂಬ ಯಾವ ವರ್ಗೀಕರಣಗಳೂ ಇಲ್ಲ ಎನ್ನುವುದನ್ನು ಹೇಳುವುದೇ ಇದೆಲ್ಲ ಚರ್ಚೆಯ ಒಟ್ಟಾರೆ ಉದ್ದೇಶ.

೨

ಮಾಯಾಲೋಕದಲ್ಲಿ ಯಾವುದೂ ಅಮುಖ್ಯವಲ್ಲ. ಯಾರೂ ಅಮುಖ್ಯರಲ್ಲ ಎಂಬ ವಾದವನ್ನು ಒಪ್ಪಬಹುದಾದರೂ ಗಮನಿಸುವಂಥ ಕೆಲವು ಪಾತ್ರಗಳಿರುವುದನ್ನು ಅಲಕ್ಷಿಸಲು ಸಾಧ್ಯವಿಲ್ಲ. ಇಲ್ಲಿರುವ ಕೆಲವು ಪಾತ್ರಗಳು ಅಣ್ಣಪ್ಪಣ್ಣ, ಕರಾಟೆಮಂಜ, ಜಗದೀಶ, ಭಂಡಾರಿಬಾಬು, ಇಕ್ಬಾಲ್‌ಸಾಬಿ, ಪ್ರಕಾಶವಾಣಿ ಸಂಪಾದಕ ಪ್ರಕಾಶ, ಎಂಎಲ್‌ಎ ಮಾರಪ್ಪ, ಮುಂತಾದವರು. ಇಲ್ಲಿ ಅಣ್ಣಪ್ಪಣ್ಣ, ಕರಾಟೆಮಂಜ, ಜಗದೀಶ, ಹಾಗೂ ಭಂಡಾರಿಬಾಬು–ಕಾದಂಬರಿಯುದ್ದಕ್ಕೂ ತಮ್ಮ ಹೆಜ್ಜೆ ಗುರುತುಗಳನ್ನು ತೋರಿಸುತ್ತಾ ಕಾದಂಬರಿಯ ಚಲನಶೀಲತೆಗೆ ಕಾರಣರಾಗುತ್ತಾರೆ.

ಅಣ್ಣಪ್ಪಣ್ಣ ಭಾರಿ ಬುದ್ಧಿವಂತ. ಚಾಣಾಕ್ಷ ಮಾತುಗಾರ. ಎಲ್ಲರನ್ನೂ ತನ್ನ ಮಾತುಗಳಿಂದಲೇ ಮರುಳು ಮಾಡಬಲ್ಲ ಕುತಂತ್ರಿ. ಜೊತೆಗೆ ಜಗಳಗಂಟ ಕೂಡ. ಯಾವುದೇ ತನ್ನ ಕೆಲಸ ಇದ್ದರೂ ತಾನೊಬ್ಬನೇ ಎಂದೂ ಮಾಡುತ್ತಿರಲಿಲ್ಲ. ಮಂಜ ಹಾಗೂ ಬಾಬುವನ್ನು ಹೇಗಾದರೂ ಪುಸಲಾಯಿಸಿ ತನ್ನ ಕೆಲಸಕ್ಕೆ ಕರೆದುಕೊಂಡು ಹೋಗುತ್ತಿದ್ದ. ವಿಚಿತ್ರ ಅಂದ್ರೆ ತನ್ನ ಕೆಲವನ್ನು ಅವನೇ ಮಾಡುತ್ತಿರಲಿಲ್ಲ. ಅವರಿಬ್ಬರನ್ನೂ ಕೆಲಸಕ್ಕೆ ಹಚ್ಚಿ ಏನಾದರೊಂದು ಉಪಾಯ ಹೂಡಿ ಅಲ್ಲಿಂದ ತಪ್ಪಿಸಿಕೊಳ್ಳುತ್ತಿದ್ದ. "ಲೋ ಬಾಬು, ಒಂದು ಕೆಲಸಾ ಮಾಡೋಣ! ಇದು ನಾಯಿಗಳು ಹಂದಿ ತಡಕೊಂಡು ಬೊಗಳ್ತ ಇರೋದೆ ಗ್ಯಾರಂಟಿ! ಇಲ್ಲಿ ನೀನು ಕೆಲಸ ಮಾಡ್ತಿರು ನಾನು ನಾಕು ಮಾರು ಹೋಗಿ ಅದೇನಕ್ಕೆ ನಾಯಿ ಬೊಗಳ್ತಿವೆ ನೋಡಿಕೊಂಡೇ ಬಂದು ಬಿಡ್ತೀನಿ ಆಯ್ತಾ" (ಮಾಯಾಲೋಕ–೧, ಪುಟ–೧೨೭, ಪ್ರ. ಪುಸ್ತಕ ಪ್ರಕಾಶನ, ಎರಡನೆ ಮುದ್ರಣ–೨೦೦೬, ಲೇ. ಕೆ.ಪಿ.ಪೂರ್ಣಚಂದ್ರ ತೇಜಸ್ವಿ) ಇದು ತನ್ನ ಕೆಲಸಕ್ಕೆಂದು ಬಾಬುವನ್ನು ಕರೆದುಕೊಂಡು ಹೋದ ಅಣ್ಣಪ್ಪಣ್ಣ ಅವನೊಬ್ಬನನ್ನೇ ಕೆಲಸಕ್ಕೆ ಹಚ್ಚಿ ತಾನು ತಪ್ಪಿಸಿಕೊಳ್ಳುವ ಪರಿ.

ಜಗ್ಗಣ್ಣ ಮತ್ತು ಕರಾಟೆಮಂಜನನ್ನು ಸೇರಿಸಿಕೊಂಡು ಹಳ್ಳದ ಪಕ್ಕದಲ್ಲಿ ಮೆಣಸಿನ ಗಿಡ ನೆಟ್ಟ ಅಣ್ಣಪ್ಪಣ್ಣ ಮೆಣಸಿನ ಮಡಿಗೆ ಹಳ್ಳದ ನೀರನ್ನೆ ತಿರುಗಿಸುತ್ತಾನೆ. ಅಬ್ಲೂಸ್‌ಬೇರಿ ಕೊಟ್ಟ ಮೀನಿನ ಗೊಬ್ಬರ ಹಾಕಿ ಫಸಲು ಸಖತ್ತಾಗಿ ಬಂದಾಗ ಜಲೀಲ್ ಸಾಬಿ ಅವನ ತೋಟದ ಮೆಣಸಿನ ಕಾಯಿಯನ್ನು ಕೊಳ್ಳುತ್ತೇನೆಂದು ಅಡ್ವಾನ್ಸ್ ಕೊಡುತ್ತಾನೆ. ಜಲೀಲ್ ಸಾಬಿಯ ಬಳಿ ಹೋಗುವುದಕ್ಕೆ ಮೊದಲು 'ಜಲೀಲ್ ಸಾಬು ಅಷ್ಟೆಲ್ಲಾ ಬೇಡ ಎನ್ನುತ್ತಾನೋ! ಏನು ರೇಟು ಕೊಡುತ್ತಾನೋ! ಎನ್ನುವ

ಕಳವಳ'(ಪುಟ-೧೮೯)ದಿಂದಲೇ ಸಾಜಿಯ ಬಳಿ ಹೋದ ಅಣ್ಣಪ್ಪಣ್ಣ ಸಾಜಿ ತನಗೆ ಜಾಸ್ತಿ ಮಾಲು ಬೇಕು ಅಂದಿದ್ದೇ ಸಾಕು 'ಹಂಗಿದ್ದರೆ ನೀ ಕೊಟ್ಟಿರೊ ಅಡ್ವಾನ್ಸ್ ಸಾಲಲ್ಲ'(ಪುಟ-೧೯೧) ಅಂತಾನೆ ಅಣ್ಣಪ್ಪಣ್ಣ. ಜಲೀಲ್ ಸಾಬಿ 'ಅಣ್ಣಪ್ಪಣ್ಣ ಈ ಸಾಬಿಗೆ ಹುಚ್ಚು ಅಂತಾ ಬೇಕಾದರೂ ತಿಳಿ, ಪರ್ವಾಗಿಲ್ಲ. ನಾಳೆ ಹೆಂಗಾರು ಮಾಡಿ ಇನ್ನು ಎಪ್ಪತ್ತೈದು ಮೂಟೆ ಕಿತ್ತು ನೂರು ಮೂಟೆ ಮಾಡಿಕೊಡ್ತೀಯ?' ಎಂದು ತನ್ನ ಬೇಡಿಕೆ ಮುಂದಿಟ್ಟಿದ್ದಕ್ಕೆ 'ಅಲ್ಲವೋ ಸಾಬು! ಎಪ್ಪತ್ತೈದು ಮೂಟೆ ಕಿತ್ತು ಗುಡ್ಡೆ ಹಾಕ್ಕೊಂಡು ಅಕಸ್ಮಾತ್ ನೀನು ಬರಲಿಲ್ಲಾಂದ್ರೆ ನಮ್ಮ ಕತೆ ಏನು?' (ಪುಟ-೧೯೧) ಎಂದು ಅನುಮಾನಿಸಿ ತನ್ನ ಮಾಲಿಗೆ ಭದ್ರತೆ ಕೇಳತ್ತಾನೆ.

ಜಲೀಲ್ ಸಾಬಿ 'ನಿನ್ನ ಹತ್ರ ಮೆಣಸಿನ ಕಾಯಿ ಅದೆಷ್ಟಿದೆ ಹೇಳು. ಈಗಲೇ ಅಡ್ವಾನ್ಸ್ ಕೊಡ್ತೀನಿ. ಅಷ್ಟೂ ನಂಗೇ ಕುಯ್ಕೊಡು, ಆದರೆ ಒಂದು ಕರಾರು. ನಿನ್ನ ಹತ್ರ ಮೆಣಸಿನ ಕಾಯಿ ಇರೋದು ಯಾರಿಗೂ ಹೇಳಬಾರದು'(ಪುಟ-೧೯೦) ಅಂತ ಹೇಳಿ ಎಲ್ಲವನ್ನೂ ತಾನೇ ಕೊಳ್ಳುವ ಹುನ್ನಾರ ನಡೆಸಿದಾಗ 'ಹುಞನೋ, ರೇಟಿರಬೇಕಾದರೆ ಕೇಳಿದವರಿಗೆ ಕೊಟ್ಟು ಕೈತೊಳಕೊಳ್ಳೋದು ಬಿಟ್ಟು ಎಲ್ಲ ಗುಟ್ಟಾಗಿಟ್ಕೊಂಡು, ಜುಟ್ಟು ನಿನ್ನ ಕೈಲಿ ಕೊಟ್ಕೊಂಡು ಕೂತಿರ್ತಿನಿ. ನಾಳೆ ರೇಟು ಬಿದ್ದೋಯ್ತು ಅಂತ ನೀನು ಕೈ ಎತ್ತಿದರೆ ನನ್ನ ಎಂಡಿರ ಮಕ್ಳ ಬಾಯಿಗೆ ಮಣ್ಣೇ'(ಪುಟ-೧೯೦) ಎನ್ನುವ ಮೂಲಕ ಮುಂದೊದಗಬಹುದಾದ ಅತಂತ್ರಕ್ಕೆ ಈಗಲೇ ಉಪಾಯ ಹುಡುಕಲೆತ್ನಿಸುತ್ತಾನೆ.

ಅಣ್ಣಪ್ಪಣ್ಣನ ಕುತಂತ್ರ ಬುದ್ದಿ ಕರಾಟೆ ಮಂಜ ಮತ್ತು ಬಾಬುಗೆ ಗೊತ್ತಿತ್ತು. ಅಲ್ಲದೆ ಯಾರನ್ನಾದರೂ ಎತ್ತಿಕಟ್ಟಿ ಜಗಳ ಹಚ್ಚಿಕೊಡುವುದರಲ್ಲಿ ನಿಷ್ಣಾತನೆಂದು ಪ್ರಸಿದ್ದನಾಗಿದ್ದ. ಮೊದಲೇ ಹೇಳಿದಂತೆ ಇವನು ಚತುರ ಮಾತುಗಾರ ಎದುರಾಳಿಗಳನ್ನು ತನ್ನ ಮಾತಿನಿಂದಲೇ ಹೆದರಿಸುತ್ತಿದ್ದ. ಅವರು ಭಯ ಬಿದ್ದರೆ ಬೈದು ಹಂಗಿಸುತ್ತಿದ್ದ. ಬಾಯಮ್ಮ ತನ್ನ ಸಾಕು ಹಂದಿಯನ್ನು ಶಿಕಾರಿ ಮಾಡಿದ್ದಾನೆಂದು ತಿಳ್ಕಂಡು ಅಣ್ಣಪ್ಪಣ್ಣನ ಮೇಲೆ ಜಗಳಕ್ಕೆ ಬಂದು "ಹೆಣ್ಣೆಂಗ್ಸು ಅಂತ ಗೂಂಡಾಗಿರಿ ಮಾಡ್ತೀರ! ಗೊಂದಲಗೇರಿ ದಫೇದಾರ್ ಸ್ಟಾನ್ಲಿ ನನ್ನ ಸೋದರ ಮಾವ ತಿಳಕೋ! ಅವನಿಗೆ ಹೇಳಿ ನಿಮ್ಮೇಲೆ ಕೇಸು ಹಾಕ್ಸಿ ಕೋವಿ ಮುಟ್ಟುಗೋಲು ಹಾಕಿಸದಿದ್ದರೆ ಕೇಳು!" (ಮಾಯಾಲೋಕ-೧, ಪುಟ-೧೩೯, ಪ್ರ. ಪುಸ್ತಕ ಪ್ರಕಾಶನ, ಎರಡನೆ ಮುದ್ರಣ-೨೦೦೬, ಲೇ. ಕೆ.ಪಿ.ಪೂರ್ಣಚಂದ್ರ ತೇಜಸ್ವಿ) ಎಂದು ಹೇಳಿದ ಬಾಯಮ್ಮನ ಮಾತಿಗೆ "ಕೇಸು ಹಾಕೋದಿದ್ದರೆ ಹಾಕಿಸು ಯಾರು ಬ್ಯಾಂಡಾಂದೋರು ಇನ್ಯಾವನಾರೂ ಚಿಕ್ಕಪ್ಪನೋ ದೊಡ್ಡಪ್ಪನೋ, ಭಾವನೋ, ಬೀಗನೋ, ಹೆಡ್ಕನೋ ಟೇಶನ್ನಿನಲ್ಲಿ ಸಿಗ್ತಾನೇನೋ ನೋಡು" (ಮಾಯಾಲೋಕ-೧, ಪುಟ-೧೩೯, ಪ್ರ. ಪುಸ್ತಕ ಪ್ರಕಾಶನ, ಎರಡನೆ ಮುದ್ರಣ-೨೦೦೬, ಲೇ. ಕೆ.ಪಿ.ಪೂರ್ಣಚಂದ್ರ ತೇಜಸ್ವಿ) ಎಂದು ಬಾಯಮ್ಮನಿಗೆ ಅಪಹಾಸ್ಯ ಮಾಡಿ ಅವಳ ಬಾಯಿ ಮುಚ್ಚಿಸಿದ್ದ. ಇವನು ಇಷ್ಟೆಲ್ಲಾ ಕುತಂತ್ರಿಯಾದ್ದರಿಂದಲೇ ಇವನಿಗೆ ಎಲ್ಲ ಕಡೆಯೂ ಎಲ್ಲರ ಎದುರೂ ಸುಲಭ ಜಯ ಸಿಗುತ್ತಿತ್ತು. ಹೀಗಾಗಿ ಇಂದಿನ ಜನರ ಮನಸ್ಥಿತಿಗೆ ಇಂದಿನ ಸಂದರ್ಭಗಳಿಗೆ ಅಣ್ಣಪ್ಪಣ್ಣನಂತ ವ್ಯಕ್ತಿತ್ವಗಳೇ ಸೂಕ್ತ ಎಂಬ ಧ್ವನಿ ಇಲ್ಲಿ ಗೋಚರಿಸುತ್ತಿರುವಂತಿದೆ. ಇದು ತೇಜಸ್ವಿಯವರ ನಿಲುವೂ ಇರಬಹುದು.

ಕರಾಟೆಮಂಜ ಒಂದು ರೀತಿಯಲ್ಲಿ ಅತ್ಯಂತ ಕ್ರಿಯಾಶೀಲ ವ್ಯಕ್ತಿ. ಯಾವುದೇ ಒಂದು ಕೆಲಸದಲ್ಲಿ ನೆಲೆ ನಿಲ್ಲುತ್ತಿರಲಿಲ್ಲವಾದರೂ ಏನಾದರೊಂದು ಕೆಲಸ ಮಾಡಿಯೇ ತೀರುತ್ತಿದ್ದ. ನಿರೂಪಕರಿಗೂ ಇವನನ್ನು ಕಂಡರೆ ಇಷ್ಟ "ಅನೇಕ ವಿಷಯಗಳಲ್ಲಿ ನನ್ನ ಅಭಿರುಚಿಗೂ ಅವನ ಅಭಿರುಚಿಗೂ ತುಂಬಾ ಸಾದೃಶ್ಯವಿರುವುದರಿಂದ ಅವನಿಗೆ ನನ್ನನ್ನು ಕಂಡರೆ ತುಂಬಾ ವಿಶ್ವಾಸ. ನನ್ನ ಹಕ್ಕಿಗಳ ಫೋಟೋಗ್ರಫಿ, ಗಾಳ ಹಾಕಿ ಮೀನು ಹಿಡಿಯುವುದು, ಕಾಡು ತಿರುಗುವುದು, ಇತ್ಯಾದಿ ಚಾಳಿಗಳ ದೆಸೆಯಿಂದ ಕರಾಟೆ ಮಂಜನಂಥ ಹಲವಾರು ಜನ ನನಗೆ ಮಿತ್ರರಾಗಿದ್ದಾರೆ ಆದರೆ ಅವರಲ್ಲೆಲ್ಲ ಕರಾಟೆ ಮಂಜ ವಿಶಿಷ್ಟ ವ್ಯಕ್ತಿ" (ಮಾಯಾಲೋಕ-೧, ಪುಟ-೪೮, ಪ್ರ. ಪುಸ್ತಕ ಪ್ರಕಾಶನ, ಎರಡನೆ ಮುದ್ರಣ-೨೦೦೬, ಲೇ. ಕೆ.ಪಿ.ಪೂರ್ಣಚಂದ್ರ ತೇಜಸ್ವಿ) ಎನ್ನುವ ಅವರ ಮಾತುಗಳಲ್ಲೇ ಕರಾಟೆ ಮಂಜನ ಬಗ್ಗೆ ನಿರೂಪಕನ ಧೋರಣೆ ವ್ಯಕ್ತವಾಗುತ್ತದೆ.

ಕರಾಟೆಮಂಜನದು ಸಾಹಸಮಯ ವ್ಯಕ್ತಿತ್ವ. ಅವನು ಒಂದೆಡೆ ನಿಲ್ಲುವವನಲ್ಲ; ಒಂದೇ ಕೆಲಸದಲ್ಲಿ ಮುಂದುವರಿಯುವವನಲ್ಲ; 'ಯಾವಾಗಲೂ ನಸುನಗುತ್ತಾ ಇರುವ ಸೌಮ್ಯ ಸ್ವಭಾವದ ವ್ಯಕ್ತಿ'. ಕರಾಟೆಯಲ್ಲಿ ನಿಷ್ಣಾತ. 'ಕರಾಟೆ ಮಂಜನ ಜೀವನ ಕ್ರಮ, ನಡವಳಿಕೆಗಳು ಅವನ ಕೆಸಲಗಳಿಂದ ಅವನ ವ್ಯಕ್ತಿತ್ವವನ್ನು ಊಹಿಸುವುದು ಸಾಧ್ಯವಾಗುತ್ತಿರಲಿಲ್ಲ'.(ಪುಟ-೪೮) ಅವನು ಯಾವ ಕೆಲಸವನ್ನೂ ಹೆಚ್ಚು ಕಾಲ ಮಾಡುತ್ತಿರಲಿಲ್ಲ. ಒಂದಷ್ಟು ದಿನ ಕಂಚಿನ ಪರಿವಾಣ ಇಟ್ಟುಕೊಂಡು ಬೀಡಾ ವ್ಯಾಪಾರ ಮಾಡಿದ, ನಂತರ ಅದನ್ನು ಕೈಬಿಟ್ಟು ಪಾನಿಪೂರಿ ವ್ಯಾಪಾರ ಶುರುಮಾಡಿದ, ಇದ್ದಕ್ಕಿದ್ದಂತೆ ಅದನ್ನೂ ಕೈಬಿಟ್ಟು ಎಳನೀರು ವ್ಯಾಪಾರಕ್ಕಿಳಿದ. ಇದನ್ನೂ ನಿಲ್ಲಿಸಿ ಗೊಂದಲಗೇರಿ ಸಂತೆಯಲ್ಲಿ ಫೋಟೋ ಅಂಗಡಿ ತೆರೆದ. ಕೊನೆಗೆ ಪ್ರಕಾಶನ ಪ್ರಕಾಶವಾಣಿ ಪತ್ರಿಕೆಗೆ ವರದಿಗಾರನೂ ಆದ- ಹೀಗೆ ಒಂದಾದ ನಂತರ ಒಂದು ಕೆಲಸವನ್ನು ಬದಲಿಸುತ್ತಾ ಬಂದ ಕರಾಟೆಮಂಜ ಕೊನೆಗೆ ವರದಿಗಾರನಾಗಿ ನಿಂತ. ಒಂದು ವ್ಯಾಪಾರವನ್ನು ಶುರುಮಾಡಿ ಅದರಲ್ಲಿ ಲಾಭವಿಲ್ಲ ಎಂದೊಡನೆ ಅದನ್ನು ಕೈಬಿಟ್ಟು ಮತ್ತೊಂದು ವ್ಯಾಪಾರವನ್ನು ಆರಂಭಿಸಿದ. ಅಂದರೆ ಕರಾಟೆಮಂಜ ಇಲ್ಲಿ ಜೀವನವನ್ನು ನೋಡುವ ಕ್ರಮವೇ ತುಂಬ ಮುಖ್ಯದ್ದಾಗುತ್ತದೆ. ಅವನು ಯಾವುದಕ್ಕೂ ಹಿಂಜರಿಯಲಿಲ್ಲ. ಹೇಗಾದರೂ ಸರಿ ಬದುಕಬಲ್ಲೆ ಎಂಬ ಆತ್ಮವಿಶ್ವಾಸವೇ ಅವನಿಗೆ ಒಂದು ಕೆಲಸವನ್ನು ಕೈಬಿಡುವಂತೆ ಹಾಗೆ ಬೇರೊಂದು ಕೆಲಸವನ್ನು ಆರಂಭಿಸುವುದಕ್ಕೆ ಧೈರ್ಯ ನೀಡುತ್ತಿತ್ತು. ಬದುಕುವುದಕ್ಕೆ ನೂರಾರು ಮಾರ್ಗಗಳಿವೆ. ಒಂದು ಮಾರ್ಗದಲ್ಲಿ ನಮಗೆ ಸೋಲುಂಟಾದರೆ ಜೀವನ ಅಲ್ಲಿಗೇ ಮುಗಿಯುವುದಿಲ್ಲ. ಆದ್ದರಿಂದ ಬದುಕಿಗೆ ಎಂದೂ ವಿಮುಖವಾಗಬಾರದು. ಬದುಕು ಒಂದು ಛಾಲೆಂಜ್. ಕರಾಟೆಮಂಜ ಬದುಕನ್ನು ಹೀಗೆ ಸ್ವೀಕರಿಸಿದವನು. ಪರೀಕ್ಷೆಯಲ್ಲಿ ಜಾಸ್ತಿ ಅಂಕಗಳು ಬರಲಿಲ್ಲ ಎಂಬ ಕಾರಣಕ್ಕೆ, ಓದಿಗೆ ತಕ್ಕ ಕೆಲಸ ಸಿಗಲಿಲ್ಲ ಎಂಬ ಕಾರಣಕ್ಕೆ ಜೀವನದಲ್ಲಿ ಜಿಗುಪ್ಸೆಗೊಂಡು ಆತ್ಮಹತ್ಯೆಗೆ ಶರಣಾಗುವ ಇಂದಿನ ಸಂದರ್ಭದಲ್ಲಿ ಯಾವ ಕೆಲಸವಾದರೂ ಮಾಡುವೆನೆಂಬ ಆತ್ಮವಿಶ್ವಾಸವಿರುವ ಕರಾಟೆಮಂಜನ ವ್ಯಕ್ತಿತ್ವ ಇಂದಿನ ಯುವಪೀಳಿಗೆಗೆ ಸ್ಫೂರ್ತಿಯಾಗಬಲ್ಲದು ಎಂದು ನನಗನ್ನಿಸುತ್ತದೆ.

ಭಂಡಾರಿ ಬಾಬು ಒಬ್ಬ ಬಡ ಕ್ಷೌರಿಕ. ಅವನು ಮಾಡುವ ಕ್ಷೌರ, ಅದರಿಂದ ಬರುವ ಹಣ ಅವನ ಒಪ್ಪತ್ತಿನ ಊಟಕ್ಕೆ ಸರಿ. ಅದರಲ್ಲೂ ಅವನಿಗೆ ಕುಡಿಯುವ ಚಟ. ಊರಿನ ಹಿರಿಯರಿಗೆಲ್ಲ

ಸಲಾಮು ಹೊಡೆಯುಕೊಂಡು ಬದುಕಿಗಾಗಿ ಹೋರಾಟ ನಡೆಸುವ ದೈನ್ಯ ವ್ಯಕ್ತಿ, ಜೊತೆಗೆ ಯಾವಾಗಲೂ ಅಣ್ಣಪ್ಪಣ್ಣನಿಗೆ ಸಹಾಯ ಮಾಡಲು ಹೋಗಿ ತಾನೊಬ್ಬನೇ ಕೆಲಸ ಮಾಡಬೇಕಾದ ಅನಿವಾರ್ಯ ಸ್ಥಿತಿಗೆ ಸಿಕ್ಕಿಹಾಕಿಕೊಳ್ಳುತ್ತಿದ್ದ ಅಮಾಯಕ. ಇದೆಲ್ಲಾ ಅಣ್ಣಪ್ಪಣ್ಣನ ಕುತಂತ್ರ ಬುದ್ಧಿಯಿಂದ. ಇವನು ಊರಿನವರ ಕ್ಷೌರಕ್ಕೆಂದು ಒಂದು ಕಡೆ ಅಂಗಡಿ ತೆರೆಯಲು ಪ್ರಯತ್ನಿಸುತ್ತಿದ್ದಾಗ ಒಬ್ಬೊಬ್ಬರು ಒಂದೊಂದು ಸಲಹೆ ನೀಡುವುದು, ಕೆಲವರು ಗ್ರಾಮ ಪಂಚಾಯ್ತಿಗೆ ಸುಂಕ ಕಟ್ಟಬೇಕೆಂದು ಹೆದರಿಸುವುದು, ಕೊನೆಗೆ ಅವನೇ ತನ್ನ ನಿರ್ಧಾರದಂತೆ ಅಂಗಡಿ ತೆರೆಯುವ ಸನ್ನಿವೇಶ ನೆನಪಿನಲ್ಲಿ ಉಳಿಯುತ್ತದೆ.

ಇಕ್ಬಾಲ್ ಸಾಬಿ ಮಕ್ಕಿಗದ್ದೆಯವರು ನೇಮಿಸಿದ್ದ ಕೆಲಸಗಾರ. ಗ್ರಾಮ ನೀರು ಸರಬರಾಜು ಯೋಜನೆಯಡಿಯಲ್ಲಿ ಮಕ್ಕಿಗದ್ದೆ ಗ್ರಾಮಕ್ಕೆ ಕುಡಿಯುವ ನೀರೊದಗಿಸಲು ಊರಿನ ಪಕ್ಕ ಹರಿಯುವ ಹಳ್ಳಕ್ಕೆ ಕೊಳವೆ ಬಾವಿ ತೋಡಿಸಿ ಪಂಪ್‌ಸೆಟ್ ಜೋಡಿಸಿ ಅದರ ಉಸ್ತುವಾರಿಗೆ ಇಕ್ಬಾಲ್‌ಸಾಬಿಯನ್ನು ನೇಮಿಸಲಾಗಿತ್ತು. ಇವನಿಗೆ ಊರಳ್ಳಿಯವರ ಮೇಲೆ ವಿಪರೀತ ಕೋಪ. ಊರಳ್ಳಿ ಸುತ್ತಮುತ್ತ ರೌಡಿಪಾಳ್ಯ ಎಂದೇ ಕುಖ್ಯಾತಿ ಪಡೆದಿತ್ತು. ಹೀಗಾಗಿ ಊರಳ್ಳಿಯವರ ಮೇಲೆ ಯಾರೂ ಜಗಳಕ್ಕೆ ಹೋಗುತ್ತಿರಲಿಲ್ಲ. ಮಕ್ಕಿಗದ್ದೆಯವರು ಹಲವುಭಾರಿ ಜಗಳಕ್ಕೆ ಹೋಗಿ ಅವರನ್ನು ಎದುರಿಸಲಾಗದೆ ಸೋತಿದ್ದರು. ಹೀಗಾಗಿ ಊರಳ್ಳಿಯವರನ್ನು ಮಕ್ಕಿಗದ್ದೆಯವರು ಏನೂ ಮಾಡಲು ಸಾಧ್ಯವಾಗುತ್ತಿಲ್ಲ ಎಂಬ ಅಸಹಾಯಕತೆಯೇ ಅವನ ಕೋಪಕ್ಕೆ ಕಾರಣವಾಗಿತ್ತು. ಹೀಗಾಗಿ ಊರಳ್ಳಿಯವನ್ನು ಸಾರ್ವಜನಿಕವಾಗಿ ಅವಮಾನಿಸಲು, ಅವಕಾಶ ಸಿಕ್ಕರೆ ಹೊಡೆದು ಹಾಕಲು ಸಮಯಕ್ಕಾಗಿ ಇಕ್ಬಾಲ್‌ಸಾಬಿ ಹವಣಿಸುತ್ತಿದ್ದ. ಕೊನೇಪಕ್ಷ ಪೋಲೀಸರಿಂದಲಾದರೂ ಹೊಡೆ ಕೊಡಿಸಬೇಕೆಂಬುದು ಅವನ ಆಸೆ. ಇದೇ ಪ್ರಯತ್ನದಲ್ಲಿ ಹಳ್ಳದ ಗುಂಡಿಗಳಲ್ಲಿ ಕಾರೇಕಾಯಿ ಜಜ್ಜಿ ಕದಡಿ ಮೀನು ಹಿಡಿದಿದ್ದಾರೆಂಬ ಆರೋಪವನ್ನು ಊರಳ್ಳಿಯವರ ಮೇಲೆ ಹಾಕಿ ಪಂಚಾಯ್ತಿಯಿಂದ ದಂಡ ಹಾಕಿಸಬೇಕೆಂದು ಹವಣಿಸಿ ಪಂಚಾಯ್ತಿ ಕರೆಸಿದ್ದ. ಆದ್ರೆ ಅಣ್ಣಪ್ಪಣ್ಣನ ಕುತಂತ್ರದ ಮುಂದೆ ಅದು ಫಲ ಕೊಡಲಿಲ್ಲ. ಮತ್ತೊಂದು ಸಾರಿ ಹಳ್ಳದ ಕುಡಿಯುವ ನೀರನ್ನು ಮೆಣಸಿನ ಮಡಿಗಳಿಗೆ ತಿರುಗಿಸಿದ್ದಾರೆಂಬ ಕಾರಣಕ್ಕೆ ಅವರ ಮೇಲೆ ಮಕ್ಕಿಗದ್ದೆ ಗ್ರಾಮಸ್ಥರನ್ನೆಲ್ಲ ಎತ್ತಿ ಕಟ್ಟಿ ಜಗಳಕ್ಕೆ ಬಂದಿದ್ದ. ಅಲ್ಲಿ ಅವರನ್ನು ಹೊಡೆಯಲು ಸಾಧ್ಯ ಆಗಲಿಲ್ಲ ಎಂದು ತಹಸೀಲ್ದಾರರಿಗೆ ಕಂಪ್ಲೆಂಟ್ ಮಾಡಿದ್ದ. ಆದರೆ ಏನೂ ಪ್ರಯೋಜನ ಆಗಿರಲಿಲ್ಲ. ಇಲ್ಲಿ ಇಕ್ಬಾಲ್‌ಸಾಬಿಗೂ ಊರಳ್ಳಿ ಪುಂಡರಿಗೂ ವೈಯಕ್ತಿಕ ದ್ವೇಷವೇನೂ ಇರಲಿಲ್ಲ. ಆದರೆ ಮಕ್ಕಿಗದ್ದೆಯ ಸೇವಕ ಆದ ಮೇಲೆ ಆತನಿಗೆ ತನ್ನ ಗ್ರಾಮದ ಕಾರಣದಿಂದ ಊರಳ್ಳಿಯವರ ಮೇಲೆ ದ್ವೇಷ ಬೆಳೆದಿತ್ತು. ಆದರೆ ಯಾವುದೇ ಜಗಳಕ್ಕೂ ಅವನೇ ಮುಂದೆ ಬರಬೇಕಾಗಿದ್ದು ಮಾತ್ರ ಅವನ ದುರಂತ.

೩

ನಿರೂಪಕರ ಪ್ರೀತಿಯ ನಾಯಿ'ಮರಿ' ಕಾದಂಬರಿಯಲ್ಲಿ ಒಂದು ಪಾತ್ರವಾಗಿ ಕಾಣಿಸಿಕೊಳ್ಳುತ್ತದೆ. ಮರಿಯ ಹುಡುಕಾಟದಲ್ಲೇ ನಮಗೆ ಕಾದಂಬರಿಗೆ ಪ್ರವೇಶ ಸಿಗುತ್ತದೆ. ಮಾಯಾಲೋಕವೆಂಬ ಈ ವಿಸ್ಮಯ ಕಾದಂಬರಿ ಲೇಖಕರು ಬಹಳ ಪ್ರೀತಿಯಿಂದ ಸಾಕಿದ್ದ 'ಮರಿ'ಯೊಂದಿಗೆ ಆರಂಭಗೊಳ್ಳುತ್ತದೆ. ತೇಜಸ್ವಿಯವರ ಎಲ್ಲ ಕಾದಂಬರಿಗಳಲ್ಲೂ ಅವರ ಪ್ರೀತಿಯ ನಾಯಿ ಒಂದು ಪಾತ್ರವಾಗಿ ಬಂದಿರುವುದನ್ನು ನಾವು ಕಂಡಿದ್ದೇವೆ. ಅದೇ ಪರಂಪರೆ ಇಲ್ಲಿ ಮುಂದುವರಿದಿದೆ. ಮರಿ ಕಾದಂಬರಿಯುದ್ದಕ್ಕೂ ಪ್ರಮುಖ ಪಾತ್ರ ವಹಿಸುತ್ತದೆ. ಹಲವು

ಅವಾಂತರಗಳನ್ನು ಸೃಷ್ಟಿಸುತ್ತ ಕೆಲವು ಮಹತ್ವದ ಘಟನೆಗಳಿಗೆ ಕಾರಣವಾಗುತ್ತದೆ. ಅದರ ಮರ್ಕಟ ದ್ವೇಷ ನಿರೂಪಕರಿಗೆ ಕಿರಿಕಿರಿ ಉಂಟುಮಾಡಿದರೆ ಓದುಗರಿಗೆ ನಗೆಯ ಸಿಂಚನವನ್ನು ಚಿಮುಕಿಸುತ್ತದೆ. ನಿರೂಪಕರ ತೋಟದಲ್ಲಿ ಮಂಗಗಳೇನಾದರೂ ಕಂಡರೆ ಮಾಲೀಕನ ಕೂಗನ್ನೂ ಲೆಕ್ಕಿಸದೆ ಅವು ಕಣ್ಣಿಗೆ ಮರೆಯಾಗುವವರೆಗೂ ಅಟ್ಟಿಸಿಕೊಂಡು ಹೋಗುವುದು, ತಮ್ಮ ಮನೆ ಬಳಿಗೇ ಬಂದ ಬುಡುಬುಡುಕೆಯವನ ಮಂಗದ ಮೇಲೆ ನೆಗೆದು ಅದು ಹಲಸಿನ ಮರ ಏರಿದರೂ ಬಿಡದೆ ಕೊನೆಗೆ ರಾಮಸ್ವಾಮಿಯ ಹಲ್ಲು ಮುರಿಯುವುದರೊಂದಿಗೆ ಮರಿಯ ಮರ್ಕಟ ದ್ವೇಷ ಅಂತ್ಯವಾಗಿದ್ದು ಓದುಗರಿಗೆ ನಿರೂಪಕನ ಫಜೀತಿ ಅಯ್ಯೊ ಎನಿಸಿದರೂ ಒಟ್ಟು ಪ್ರಹಸನ ಹಾಸ್ಯದ ರುಚಿ ತೋರಿಸುವುದಂತೂ ನಿಜ. ಆದರೆ ಮರಿಯ ಈ ಪ್ರಮಾಣದ ಮರ್ಕಟ ದ್ವೇಷಕ್ಕೆ ಕಾರಣವೇನು? ಎಂದು ಯೋಚಿಸಿದರೆ ಅದು ಪ್ರಶ್ನೆಯಾಗಿಯೇ ಉಳಿಯುತ್ತದೆ.

೪

ಸಾಮಾನ್ಯವಾಗಿ ಎಲ್ಲ ಕಾದಂಬರಿಗಳೂ ನಿರೂಪಣಾ ವಿಧಾನವನ್ನು ಅಭಿವ್ಯಕ್ತಿ ತಂತ್ರವಾಗಿ ಅನುಸರಿಸುತ್ತವೆ. ಆದರೆ ನಿರೂಪಣೆ ಮಾಡುವ ವ್ಯಕ್ತಿ ಬೇರೆ ಬೇರೆಯಾಗುತ್ತಾರೆ ಅಷ್ಟೆ. ಮಾಯಾಲೊಕದಲ್ಲಿ ಲೇಖಕರೇ ನಿರೂಪಕರಾಗಿದ್ದಾರೆ. ಇಲ್ಲಿನ ನಿರೂಪಕ ಲೇಖಕನೇ ಎಂದು ತಿಳಿಯಲು ಸಂಶಯಪಡುವ ಅಗತ್ಯವೇ ಇಲ್ಲ. ಏಕೆಂದರೆ ಲೇಖಕರ ನೈಜ ವಿವರಗಳೇ ನಿರೂಪಕನ ವಿವರಗಳಾಗಿ ಬರುವುದರಿಂದ ಲೇಖಕರೇ ಇಲ್ಲಿ ನಿರೂಪಣೆ ಮಾಡುತ್ತಿದ್ದಾರೆ ಎಂಬುದು ವೇದ್ಯವಾಗುತ್ತದೆ. ಲೇಖಕನೆ ನಿರೂಪಕ ಎಂಬುದನ್ನು ಮರೆತು ನಿರೂಪಕನನ್ನು ಒಂದು ಪಾತ್ರವಾಗಿ ನೋಡಲು ಸಾಧ್ಯವಿದೆ. ನಿರೂಪಣೆ ಯಾರಿಂದ ನಡೆಯುತ್ತದೋ ಅವರ ದೃಷ್ಟಿಕೋನದಲ್ಲೇ ಕಾದಂಬರಿ ನಿರೂಪಿಸಲ್ಪಡುತ್ತದೆ.

ನಿರೂಪಕ ಕೇವಲ ನಿರೂಪಕನಾಗಿಲ್ಲ. ಸನ್ನಿವೇಶಗಳನ್ನು ನಿರೂಪಿಸುತ್ತಲೇ ಅದರ ವಿಶ್ಲೇಷಣೆ ನಡೆಸುತ್ತಾನೆ. ಅದರ ಕಾರಣ–ಪರಿಣಾಮಗಳನ್ನು ಪರಿಶೀಲಿಸುತ್ತಾನೆ. ಕರಾಟೆ ಮಂಜ, ಅಣ್ಣಪ್ಪಣ್ಣ ಮತ್ತು ಭಂಡಾರಿ ಬಾಬು–ಇವರೊಂದಿಗೆ ಹತ್ತಿರದ ಸಂಬಂಧವಿರಿಸಿಕೊಂಡು ಅವರ ವರ್ತನೆಗಳನ್ನು ನಿಯಂತ್ರಿಸುವ ಯಜಮಾನಿಕೆಯನ್ನೂ, ಅವರಿಗೆ ಸಲಹೆ ಸೂಚನೆಗಳನ್ನು ನೀಡುವ ಮಾರ್ಗದರ್ಶಕನಾಗಿಯೂ ಪಾತ್ರ ವಹಿಸುತ್ತಾನೆ. ನಿರೂಪಕನಿಗೆ ಸಮಾಜದಲ್ಲಿ ಹೆಚ್ಚಿನ ಗೌರವ ಸ್ಥಾನ ಮಾನವಿದೆ. ಹಾಗಾಗಿ ನಿರೂಪಕನನ್ನು ಎಲ್ಲರೂ ಅತಿ ಗೌರವದಿಂದ ಕಾಣುತ್ತಾರೆ ಮತ್ತು ಅವರ ಸಲಹೆಗಳನ್ನು ಸ್ವೀಕರಿಸುತ್ತಾರೆ. ನಿರೂಪಕ ಅವನ ಕುಟುಂಬ, ಅಂದರೆ ಹೆಂಡತಿ ರಾಜೇಶ್ವರಿ, ಮಗಳು ಸುಸ್ಮಿತ–ಇವರೂ ಕಾದಂಬರಿಯ ಕೆಲವೆಡೆ ಕಾಣಿಸಿಕೊಳ್ಳುತ್ತಾರೆ. ನಿರೂಪಕನ ವೈಯಕ್ತಿಕ ಅನುಭವಗಳು, ಕಾಣ್ಕೆಗಳು ಕಾದಂಬರಿಯುದ್ದಕ್ಕೂ ಹರಡಿಕೊಂಡಿವೆ. ಓದುಗರಿಗೂ ನಿರೂಪಕನ ಅನುಭವದ ನೆಲೆಯಲ್ಲಿಯೇ ಕಾದಂಬರಿ ತನ್ನ ಪ್ರಾಥಮಿಕ ಹಂತದಲ್ಲಿ ದಕ್ಕುತ್ತದೆ. ಇಲ್ಲಿ ಪ್ರಾಥಮಿಕ ಎಂದು ಬಳಸಿದ್ದರ ಉದ್ದೇಶ ಇಷ್ಟೆ. ಕೇವಲ ನಿರೂಪಕನ ದೃಷ್ಟಿಯಲ್ಲೇ ಕಾದಂಬರಿ ಪೂರ್ಣ ಪ್ರಮಾಣದಲ್ಲಿ ದಕ್ಕುವುದಾದರೆ ಇದರ ವಿಭಿನ್ನ ಓದುಗಳು ಸಾಧ್ಯವಿರಲಿಲ್ಲ ಮತ್ತು ಓದುಗರ ಪ್ರತಿಭೆ ಹಾಗೂ ಮುಖಾಮುಖಿಗೂ ಬೆಲೆ ಇರುತ್ತಿರಲಿಲ್ಲ. ಕಾದಂಬರಿಯನ್ನು ಓದಿದೊಡನೆ ಅದರ ಒಟ್ಟು

ಅನುಭವ ನಮ್ಮನ್ನು ತಟ್ಟುವುದು ಅದರ ಪ್ರಾಥಮಿಕ ನೆಲೆಯಲ್ಲಿ ಅಂದರೆ ನಿರೂಪಣಾ ನೆಲೆಯಲ್ಲಿ. ಆ ನಂತರ ನಮ್ಮ ಜ್ಞಾನ, ಅನುಭವ, ಹಾಗೂ ಕಾದಂಬರಿಗೆ ನಮ್ಮ ಮುಖಾಮುಖಿ ಯಾವ ಬಗೆಯದು ಎಂಬುದನ್ನು ಅವಲಂಬಿಸಿ ಕಾದಂಬರಿಯ ದಕ್ಕುವಿಕೆಯೂ ಭಿನ್ನವಾಗುತ್ತಾ ಹೋಗುತ್ತದೆ. ಈ ಹಿನ್ನೆಲೆಯಲ್ಲಿ ನೋಡಿದರೆ ನಿರೂಪಕನ ಪಾತ್ರವೇ ಕಾದಂಬರಿಯಲ್ಲಿ ಮುಖ್ಯ ಪಾತ್ರವಾಗಿ ಕಾಣಿಸಿಕೊಳ್ಳುತ್ತದೆ.

*****

## ಅಧ್ಯಾಯ: ೪
## ಮಾಯಾಲೋಕದಲ್ಲಿ ಸಾಮಾಜಿಕತೆ

ಸಾಮಾಜಿಕ ಬದುಕಿನ ಚಿತ್ರಣ ಬಹುತೇಕ ಕಾದಂಬರಿಗಳ ಹೂರಣವೇ ಆದರೂ ಅದರ ಅಭಿವ್ಯಕ್ತಿಯಲ್ಲಿ ಭಿನ್ನತೆಯಿರುತ್ತದೆ. ಈ ಸಂಬಂಧ ತೇಜಸ್ವಿ ಅಭಿವ್ಯಕ್ತಿ ಅನನ್ಯವೆಂದೇ ಹೇಳಬೇಕು. ತೇಜಸ್ವಿಯವರಂತೆ ಸಾಮಾಜಿಕ ಬದುಕನ್ನು ತಮ್ಮ ಕಾದಂಬರಿಗಳಲ್ಲಿ ಇಷ್ಟು ಸೂಕ್ಷ್ಮವಾಗಿ ಅದರ ಎಲ್ಲ ದೇಸಿ ಸೊಗಡಿನಲ್ಲಿಯೇ ಅಭಿವ್ಯಕ್ತಿಸಿರುವ ಲೇಖಕರು ವಿರಳವೆಂದೇ ಹೇಳಬೇಕು. ಇಲ್ಲಿ ಮತ್ತೆ ನಾವು ಕಾರಂತರನ್ನೇ ನೋಡಬೇಕಾದ್ದು ಅನಿವಾರ್ಯ ಎನಿಸುತ್ತದೆ. ಕಾರಂತರ ಕಾದಂಬರಿಗಳೂ ಕೂಡ ಕರಾವಳಿ ಪ್ರದೇಶದ ಬದುಕನ್ನು ದಟ್ಟವಾಗಿ ಅಭಿವ್ಯಕ್ತಿಸಿವೆ. ತೇಜಸ್ವಿ ಸಾಹಿತ್ಯ ಚಿತ್ರಿಸುವ ಸಾಮಾಜಿಕ ಬದುಕು ಅದು ಕೇವಲ ಚಿಕ್ಕಮಗಳೂರು ಅಥವಾ ಮಲೆನಾಡಿಗೆ ಸೀಮಿತವೆನಿಸುವುದಿಲ್ಲ. ಬದಲಿಗೆ ಇಡೀ ದೇಶದ ಅಂಥದೇ ಪ್ರದೇಶಗಳ ಒಟ್ಟು ಚಿತ್ರಣ ಎನಿಸುತ್ತದೆ. ಇದೇ ತೇಜಸ್ವಿ ಅಭಿವ್ಯಕ್ತಿಸಿರುವ ಸಾಮಾಜಿಕತೆಯ ಅನನ್ಯತೆ.

ಸಾಮಾಜಿಕತೆ ಎಂದರೆ ಅದು ಕೇವಲ ಬದುಕಿನ ಚಿತ್ರಣವಲ್ಲ. ಬದುಕಿನ ಕಡೆಗೊಂದು ಮಾನವೀಯ ನೋಟ, ತಮ್ಮ ಸಾಹಿತ್ಯದಲ್ಲಿ ಸಮಾಜದಲ್ಲಿನ ಸಮಸ್ಯೆಗಳಿಗೆ ಪರಿಹಾರ ಹುಡುಕುವ ಪ್ರಯತ್ನ, ಸಾಂಪ್ರದಾಯಿಕ ಬದುಕನ್ನು ವೈಜ್ಞಾನಿಕವಾಗಿ ಚಿಂತಿಸುವ, ಆ ಸಮಾಜದಲ್ಲಿನ ಆಚಾರ-ವಿಚಾರಗಳನ್ನು ಹೊಸ ದೃಷ್ಟಿ ಕೋನದಿಂದ ನೊಡುವ ಕ್ರಮ, ಸಂದರ್ಭಾನುಸಾರ ಸಮೂಹಕ್ಕೂ ವ್ಯಕ್ತಿತ್ವಕ್ಕೂ ಬೆಲೆ ನೀಡುವ ಔದಾರ್ಯ, ಧರ್ಮ, ಜಾತಿ ಬಗೆಗಿನ ಲೇಖಕರ ಧೋರಣೆ ಎಲ್ಲವೂ ಒಳಗೊಂಡು ಅದು ಸಾಮಾಜಿಕತೆ ಎನಿಸಿಕೊಳ್ಳುತ್ತವೆ. ಇಂಥ ಸಾಮಾಜಿಕತೆಯ ಪ್ರಗತಿಪರ ನೋಟವನ್ನು ತೇಜಸ್ವಿ ಕಾದಂಬರಿಗಳು ಅಭಿವ್ಯಕ್ತಿಸುತ್ತವೆ. ಇದಕ್ಕೆ ಮಾಯಾಲೋಕದಲ್ಲೂ ಸಾಕಷ್ಟು ಉದಾಹರಣೆಗಳು ದೊರಕುತ್ತವೆ.

ಪಟ್ಟಣ ಪ್ರದೇಶದ ಚಿತ್ರಣವನ್ನು ಕನ್ನಡ ಸಾಹಿತ್ಯಕ್ಕೆ ಮೊದಲು ಪರಿಚಯಿಸಿದ್ದು ತೇಜಸ್ವಿ ಸಾಹಿತ್ಯ. ಅತ್ತ ನಗರವೂ ಅಲ್ಲದ ಇತ್ತ ಹಳ್ಳಿಯೂ ಅಲ್ಲದ ಪಟ್ಟಣ ಪ್ರದೇಶದ ಪರಿಸರ ಮಾಯಾಲೋಕದಲ್ಲಿ ಅತ್ಯಂತ ಸಹಜವಾಗಿ ಅದರ ಪೂರ್ಣರೂಪದೊಂದಿಗೆ ಮೂಡಿಬಂದಿದೆ. ಕನ್ನಡ ಸಾಹಿತ್ಯದಲಿ ಪಟ್ಟಣ ಪ್ರದೇಶದ ಪರಿಸರ ಪ್ರವೇಶಮಾಡಿರುವುದು ಅದು ತೇಜಸ್ವಿ ಸಾಹಿತ್ಯದಲ್ಲಿ ಮಾತ್ರ. ಅದಕ್ಕೆ ತೇಜಸ್ವಿ ಮೈಸೂರಿನಂಥ ಮಹಾನಗರದಿಂದ ಹೊರಬಿದ್ದು ಮೂಡಿಗೆರೆಯೆಂಬ ಪಟ್ಟಣ ಪರಿಸರಕ್ಕೆ ಆಗಮಿಸಿ ಅಲ್ಲೇ ನೆಲೆಯೂರಿದ್ದೇ ಕಾರಣವಿರಬಹುದು. ಮೂಡಿಗೆರೆಯಲ್ಲಿ ನೆಲೆಯೂರಿದ ತೇಜಸ್ವಿ ಕೃಷಿ, ಫೋಟೊಗ್ರಫಿ, ಬೇಟೆ, ಸಾಹಿತ್ಯ ಮುಂತಾದ ಹತ್ತು ಹಲವು ವಿಚಾರಗಳಲ್ಲಿ ಪ್ರಯೋಗ ನಡೆಸಿದರು. ಪ್ರಕೃತಿಯೊಂದಿಗೆ ನಿಕಟ ಒಡನಾಟ ಏರ್ಪಡಿಸಿಕೊಂಡ ತೇಜಸ್ವಿಗೆ ಸಹಜವಾಗಿಯೇ

ಬೇಟೆಯಾಡುವುದು, ಮೀನು ಹಿಡಿಯುವುದು, ಕಾಡಿನಲ್ಲಿ ಅಲೆದಾಡುವುದು, ಹಕ್ಕಿ-ಪಕ್ಷಿಗಳ ಫೋಟೊ ತೆಗೆಯುವುದು ಮುಂತಾದ ವಿಚಾರಗಳಲ್ಲಿ ತಲ್ಲೀನವಾಗಲು ಸಾಧ್ಯವಾಯಿತು. ಈ ತಲ್ಲೀನತೆಯೇ ಅವರ ಲೋಕಗ್ರಹಿಕೆಯನ್ನು ಸೂಕ್ಷ್ಮಗೊಳಿಸಿತು. ಹೀಗಾಗಿ ತೇಜಸ್ವಿ ಮೂಡಿಗೆರೆಯೂ ಸೇರಿದಂತೆ ಗೊಂದಲಗೇರಿ ಎಂಬ ಅರೆನಗರದ ಪರಿಸರವನ್ನು ದಟ್ಟವಾಗಿ ಮಾಯಾಲೋಕದಲ್ಲಿ ಕಟ್ಟಿಕೊಟ್ಟರು.

೧

ಗೊಂದಲಗೇರಿ ಎಂಬ ಪುಟ್ಟ ಪಟ್ಟಣವೊಂದು ಹೇಗೆ ಹತ್ತು ಹಲವು ವಿಚಾರಗಳಲ್ಲಿ ಸಕ್ರಿಯವಾಗಿದೆ ಎನ್ನುವುದನ್ನು ನೋಡಿದರೆ ಆಶ್ಚರ್ಯ ಹುಟ್ಟಿಸುತ್ತದೆ. ಪುಟ್ಟ ಪಟ್ಟಣದಲ್ಲಿ ಇಷ್ಟೆಲ್ಲಾ ವಿದ್ಯಾಮಾನಗಳು ಜರುಗಬಹುದೆ! ಎಂಬ ಕೌತುಕ ಈ ಕಾದಂಬರಿಯನ್ನು ಓದಿದ ಯಾರಿಗಾದರೂ ಕಾಡದೆ ಇರದು. ಇಲ್ಲಿನ ರಾಜಕೀಯ ರಾಜಧಾನಿ ರಾಜಕೀಯವನ್ನೂ ಮೀರಿಸುತ್ತದೆ. ಡಿಎಸ್ಎಸ್, ರೈತಸಂಘ, ಕಾರ್ಮಿಕ ಸಂಘಟನೆ ಮುಂತಾದ ಸಂಘಟನೆಗಳು ಇಲ್ಲಿ ಸಕ್ರಿಯವಾಗಿದ್ದಷ್ಟು ನಗರ ಪ್ರದೇಶದಲ್ಲೂ ಸಕ್ರಿಯವಾಗಿರುವುದಿಲ್ಲ ಎನಿಸುತ್ತದೆ. ಅಲ್ಲಿ ನಡೆಯುವ ಸಂತೆ; ಆ ಸಂತೆಯಲ್ಲಿನ ವ್ಯಾಪಾರ ವ್ಯವಹಾರಗಳು; ಗ್ರಾಮೀಣತೆಯನ್ನು ದಾಟಿದ ಪರಿಸರ ನಮ್ಮನ್ನು ಚಕಿತಗೊಳಿಸುತ್ತದೆ.

ಗೊಂದಲಗೇರಿ ಸಂತೆಯಲ್ಲಿ ಕರಾಟೆಮಂಜ ಒಂದು ಫೋಟೊ ತೆಗೆಯುವ ಟೆಂಟ್ ಹಾಕಿಕೊಂಡು ವಿವಿಧ ರಾಷ್ಟ್ರ ನಾಯಕರ ಕಟೌಟ್‌ಗಳನ್ನು ತಯಾರಿಸಿ ಅವುಗಳ ಜೊತೆ ಸಾಮಾನ್ಯ ಜನರ ಫೋಟೋ ತೆಗೆದುಕೊಟ್ಟು ಹಣ ಮಾಡುತ್ತಿದ್ದ. ಇಲ್ಲಿ ಕರಾಟೆಮಂಜನ ವ್ಯಾಪಾರದ ಹೊಸ ತಂತ್ರ, ಜನರ ಸಹಜ ಅಭಿಲಾಷೆಯನ್ನೇ ತನ್ನ ಬಂಡವಾಳವಾಗಿಸಿಕೊಳ್ಳುವ ಅವನ ವ್ಯಾಪಾರೀ ಮನೋಭಾವವನ್ನು ನೋಡಿದರೆ ತೇಜಸ್ವಿಯವರಿಗಿದ್ದ ವ್ಯಾವಹಾರಿಕ ಜಾಣ್ಮೆಯನ್ನು ಪ್ರತಿನಿಧಿಸುತ್ತದೆ. ತಾಲ್ಲೂಕು ಅಥವಾ ಹೋಬಳಿ ಕೇಂದ್ರದಲ್ಲಿ ಸಾಮಾನ್ಯವಾಗಿ ವಾರಕ್ಕೊಮ್ಮೆ ನಡೆಯುವ ಸಂತೆಗೆ ಸುತ್ತಮುತ್ತಲ ಹತ್ತಾರು ಹಳ್ಳಿಯ ಸಾವಿರಾರು ರೈತರು ವಾರಕ್ಕೆ ಮನೆಗೆ ಬೇಕಾದ ದಿನಸಿ ಪದಾರ್ಥ, ಬೇಸಾಯದ ಸಲಕರಣೆಗಳು, ಅಡುಗೆಗೆ ತರಕಾರಿ, ಇತರೆ ಅಗತ್ಯ ವಸ್ತುಗಳನ್ನು ಕೊಳ್ಳಲು, ಮಾರಲು ಸಂತೆಗೆ ಆಗಮಿಸುತ್ತಾರೆ. ಇದು ಗ್ರಾಮೀಣ ಭಾಗದ ಸಂತೆಯ ಸ್ವರೂಪ. ಇದರಾಚೆ ಅಲ್ಲಿ ನಡೆಯುವ ವ್ಯವಹಾರಗಳೇ ಹೆಚ್ಚು ಆಸಕ್ತಿ ಹುಟ್ಟಿಸುತ್ತವೆ.

ಸಂತೆ ನಡೆಯುವ ಸಮಯದಲ್ಲಿ ಅಲ್ಲಿ ಎಲ್ಲ ಪದಾರ್ಥಗಳೂ ಬೀದಿಗೆ ಬರುತ್ತವೆ. ಬಟ್ಟೆ ಬರೆ, ಚಪ್ಪಲಿಗಳಿಂದ ಆರಂಭಿಸಿ, ಎಲೆಕ್ಟ್ರಾನಿಕ್ ವಸ್ತುಗಳೂ ಸೇರಿದಂತೆ ಅಂಗಡಿಯೊಳಗಿನ ಎಲ್ಲ ಸರಕುಗಳೂ ಬೀದಿಗಿಳಿಯುತ್ತವೆ. ಉತ್ತರ ಭಾರತದ ನಕಲಿ ಆಯುರ್ವೇದಿಕ್ ವ್ಯಾಪಾರಿಗಳು ಟೆಂಟು ಹಾಕುತ್ತಾರೆ. ಸಿನಿಮಾ ಪೋಸ್ಟರ್‌ಗಳನ್ನು ಹೊತ್ತ ಆಟೋಗಳು ಕೂಗುತ್ತಾ ಸಂತೆಯಲ್ಲೆಲ್ಲಾ ತಿರುಗಾಡುತ್ತವೆ. ಸಂತೆಗೆ ಬಂದ ರೈತರನ್ನು(ರೈತರನ್ನೂ ಒಳಗೊಂಡು ಎಲ್ಲ ವ್ಯಾಪಾರಿಗಳು) ಚಿತ್ರಮಂದಿರಗಳಿಗೆ ಸೆಳೆಯಲು ಇನ್ನಿಲ್ಲದ ಪ್ರಯತ್ನ ನಡೆಸುತ್ತಾರೆ. ಕೊಳಕು ನೀರಿಗೆ ಒಂದಷ್ಟು ಸಕ್ಕರೆ, ನಿಂಬೆಹಣ್ಣಿನ ರಸ ಬೆರೆಸಿ ಜ್ಯೂಸ್ ಎಂದು ಮಾರುವ ಬೀದಿಗೊಂದು ತಳ್ಳುಗಾಡಿಗಳು, ಅಲ್ಲೇ ಜನ ನೆರೆದಿರುವ ಒಂದು ಮೂಲೆಯಲ್ಲಿ ಎಳೆಯ ಮಕ್ಕಳನ್ನು ಹಗ್ಗದ ಮೇಲೆ ನಡೆಸುವ, ರಿಂಗಿನಲ್ಲಿ ತೂರಿಸುವ, ಮಂಗನಿಂದ ಮಂಗಾಟ ಆಡಿಸುವ ಸರ್ಕಸ್, ಇವೆಲ್ಲದರ ಜೊತೆಗೆ ಸಂತೆಗೆ ನೆರೆದ ಸಮೂಹವನ್ನು ತಮ್ಮ

ರಾಜಕೀಯ ಪ್ರೇಕ್ಷಕರಾಗಿ ಬಳಸಿಕೊಳ್ಳುವ ರಾಜಕಾರಣಿಗಳ ತಂತ್ರ. ಒಟ್ಟಿನಲ್ಲಿ ಸಂತೆ ಎಂಬ ಜಗತ್ತೆ ಒಂದು ವಿಸ್ಮಯ. ಅಲ್ಲಿ ನಡೆಯುವ ವೈವಿಧ್ಯಮಯ ಘಟನೆಗಳು ಮುಂದುವರಿಯುತ್ತಿರುವ ಗ್ರಾಮೀಣ ಭಾರತವೆಂಬ ಒಂದು ಬೃಹತ್ ಪ್ರಪಂಚವನ್ನೇ ತೆರೆದು ತೋರಿಸುತ್ತವೆ. ಇಷ್ಟು ಸೂಕ್ಷ್ಮ ವಿವರಗಳೊಂದಿಗೆ ಪಟ್ಟಣ ಪ್ರದೇಶಗಳನ್ನು ಚಿತ್ರಿಸಿದ ಕನ್ನಡ ಸಾಹಿತ್ಯದ ಮೊದಲ ಲೇಖಕ ತೇಜಸ್ವಿ.

೨

ಊರಳ್ಳಿ–ಮಕ್ಕಿಗದ್ದೆ ಎಂಬ ಎರಡು ಪುಟ್ಟ ಹಳ್ಳಿಗಳು ಇಬ್ಬರು ವ್ಯಕ್ತಿಗಳಂತೆ ಪರಸ್ಪರ ಬದ್ಧವೈರಿಗಳಾಗಿರುವುದನ್ನು ನೋಡಿದರೆ ಬಿಕ್ಕಟ್ಟಿನ ಅಥವಾ ಆತಂಕದ ಸಮಯದಲ್ಲಿ ಸಾಮಾಜಿಕ ಒಗ್ಗಟ್ಟು ಎನ್ನುವುದು ಹೇಗೆ ತನ್ನ ಪೂರ್ಣರೂಪ ಪ್ರದರ್ಶಿಸಲ್ಪಡುತ್ತದೆ ಎನ್ನುವುದು ಕೌತುಕವನ್ನುಂಟು ಮಾಡುತ್ತದೆ. ಊರಳ್ಳಿ ಮತ್ತು ಮಕ್ಕಿಗದ್ದೆಯ ಗ್ರಾಮಸ್ಥರಲ್ಲಿ ಯಾರಿಗೂ ವೈಯಕ್ತಿಕ ದ್ವೇಷಗಳಿರುವುದು ಕಂಡು ಬರುವುದಿಲ್ಲ. ಆದರೆ ಎರಡು ಗ್ರಾಮದ ವಿಷಯ ಬಂದಾಗ ಅವರೆಡೂ ಬದ್ಧ ದ್ವೇಷಿಗಳು. ವೈಯಕ್ತಿಕವಾಗಿ ಯಾವುದೇ ದ್ವೇಷವಿಲ್ಲದಿದ್ದರೂ ಅವರಿಂದ ವೈಯಕ್ತಿಕ ಅಪಾಯ ಎದುರಾಗದಿದ್ದರೂ ಸಾಮಾಜಿಕವಾಗಿ ಅವರನ್ನು ದ್ವೇಷ ಸಮೂಹದ ಒಂದು ಭಾಗವಾಗಿಸುವ ಶಕ್ತಿಯಾವರೂ ಯಾವುದು ಎಂದು ಯೋಚಿಸಿದಾಗ ಇಂದಿನ ಕಾಲದಲ್ಲಿ ಹಲವು ವಿಷಯಗಳಿಗೆ ಬದ್ಧ ವೈರಿಗಳಂತೆ ವರ್ತಿಸುತ್ತಿರುವ ಕುರಿತು ಮತ್ತಷ್ಟು ವಿಚಾರಗಳು ಹೊಳೆಯಬಹುದು.

ಇದನ್ನೇ ಇನ್ನಷ್ಟು ವ್ಯಾಪಕವಾಗಿ ಚಿಂತಿಸಿದರೆ ಇದು ಒಂದು ಮಹಾನ್ ರೂಪಕವಾಗುತ್ತದೆ. ಧರ್ಮದ ವಿಷಯದಲ್ಲಿ ಸ್ನೇಹಿತ ಹಿಂದೂವಿಗೂ ವೈರಿಯಾಗುವ ಮುಸ್ಲಿಂ ಗೆಳೆಯ, ಅಂದರೆ ಇಬ್ಬರು ವಿಭಿನ್ನ ಧರ್ಮದ ಗೆಳೆಯರನ್ನು ತೆಗೆದುಕೊಂಡರೆ ಸಾಮಾಜಿಕವಾಗಿ ಅವರಿಬ್ಬರೂ ಸ್ನೇಹಿತರು ಆದರೆ ಧರ್ಮದ ವಿಷಯಕ್ಕೆ ಬಂದಾಗ ಹಿಂದೂ–ಮುಸ್ಲಿಂ ಎಂಬ ವೈರಿಗಳು. ಇವರಲ್ಲಿ ವೈರತ್ವದ ಕಿಚ್ಚು ಹಚ್ಚುವ ಶಕ್ತಿ ಯಾವುದು ಎಂದು ಯೋಚಿಸಿದರೆ ಅದು ಧಾರ್ಮಿಕ ಮೂಲಭೂತವಾದ. ಜಾತಿಯ ವಿಷಯ ಬಂದಾಗ ಎಷ್ಟೇ ಅಪ್ತರಾದರೂ ಮೂಡುವ ಬಿರುಕು, ಇಂದಿನ ಸಂರ್ಭದಲ್ಲಿ ಜಾತಿಗಳು ಸಂಘಟನೆಗೊಳ್ಳುತ್ತಾ ಜಾತೀಯತೆಯನ್ನು ಮತ್ತಷ್ಟು ಭದ್ರಗೊಳಿಸುತ್ತಿವೆ. ಎಂದೂ ಯಾರೂ ಕೇಳಿರದಂಥ ಜಾತಿಗಳೂ ಕೂಡ ಇಂದು ರಾಜ್ಯ ಮಟ್ಟದಲ್ಲಿ ಸಂಘಟನೆಯನ್ನು ಸ್ಥಾಪಿಸಿಕೊಂಡು ತಮ್ಮದೇ ಐಡೆಂಟಿಟಿಗಾಗಿ ಪರದಾಡುತ್ತಿವೆ. ಇದು ಮತೀಯ ಭಾವನೆಯನ್ನು ಜನರಲ್ಲಿ ಮತ್ತಷ್ಟು ಪ್ರಚೋದಿಸುತ್ತಿದೆ. ರಾಷ್ಟ್ರದ ವಿಚಾರ ಬಂದಾಗ ಎದುರಾಳಿಗಳಾಗುವ ನೆರೆ ಹೊರೆ ರಾಷ್ಟ್ರಗಳು. ಖಂಡ ಖಂಡಗಳ ವಿಷಯದಲ್ಲಿ ನಾವು ಏಷಿಯನ್ನರು ನಾವು ಯೂರೋಪಿಯನ್ನರು ಎಂಬ ವಿಭಿನ್ನತೆ. ಹೀಗೆ ಇದನ್ನು ಎಷ್ಟು ಬೇಕಾದರೂ ವಿಸ್ತರಿಸಬಹುದು. ಕುಟುಂಬ ಕುಟುಂಬಗಳು, ಗುಂಪು ಗುಂಪುಗಳು, ಪಂಗಡ ಪಂಗಡಗಳು, ಜಾತಿ ಜಾತಿಗಳು, ಧರ್ಮ ಧರ್ಮಗಳು, ದೇಶ ದೇಶಗಳು–ಹೀಗೆ ಸಾಮೂಹಿಕೆ ಎನ್ನುವುದು ಹಲವು ಸ್ವರೂಪಗಳಲ್ಲಿ ಪ್ರಕಟಗೊಳ್ಳುತ್ತಿದೆ. ಇದೆಲ್ಲವನ್ನೂ ಊರಳ್ಳಿ–ಮಕ್ಕಿಗದ್ದೆ ಜಗಳ ಧ್ವನಿಸಿಬಿಡುತ್ತದೆ.

ಊರಳ್ಳಿ–ಮಕ್ಕಿಗದ್ದೆಗಳ ಜಗಳ ಅಥವಾ ದ್ವೇದಷನ್ನು ಕೇವಲ ಹಳ್ಳಿಗಳಿಗೇ ಸೀಮಿತಗೊಳಿಸಿ ಯೋಚಿಸುವುದಾದರೆ, ಹಳ್ಳದ ಗುಂಡಿಗಳಲ್ಲಿ 'ಯಾರೋ ಕಳ್ಳಸೂಳೇಮಕ್ಕಳು ಕಾರೇಕಾಯಿ ಜಜ್ಜಿ

ಮೀನು ಹಿಡಿದಿರುವುದಕ್ಕೆ' ಪಂಚಾಯ್ತಿ ಕರೆಸುವ, ಹಳ್ಳದ ನೀರನ್ನು ಮೆಣಸಿನ ಮಡಿಗೆ ತಿರುಗಿಸಿದ್ದಕ್ಕೆ ತಹಸೀಲ್ದಾರರವರೆಗೂ ಪುಕಾರು ನೀಡುವ, ಹಳ್ಳಿಗಳ ಇಂಥ ಪುಡಿ ರಾಜಕೀಯ ನಗರ ರಾಜಕೀಯವನ್ನೂ ಮೀರಿಸುವಂತೆ ಬೆಳೆದಿದೆ. ಇಲ್ಲಿ ಗಮನಿಸಬೇಕಾದ ಮತ್ತೊಂದು ವಿಷಯ ಎಂದರೆ ಜಗಳಕ್ಕೆ ಕಾರಣವಾಗುವ ಎಲ್ಲಾ ವಿಚಾರಗಳೂ ಇಡೀ ಗ್ರಾಮಕ್ಕೇನೂ ಸಂಬಂಧಿಸಿರುವುದಿಲ್ಲ. ಬದಲಿಗೆ ಕೆಲವರು ತಮ್ಮ ಸ್ವಾರ್ಥಕ್ಕಾಗಿ ಅಂತಹ ಸಮಸ್ಯೆಯನ್ನು ಗ್ರಾಮದ ಸಮಸ್ಯೆಯಾಗಿ ಪರಿವರ್ತಿಸುತ್ತಾರೆ. ಹೀಗಾಗಿ ತಮ್ಮದಲ್ಲದ ತಪ್ಪಿಗಾಗಿ ಅಥವಾ ತಮಗೆ ಯಾವ ಉಪಯೋಗವಿಲ್ಲದಿದ್ದರೂ ಗ್ರಾಮದ ಮುಗ್ಧ ಜನ ಅನಿವಾರ್ಯವಾಗಿ ಈ ದ್ವೇಷದ ಭಾಗವಾಗಬೇಕಾಗುತ್ತದೆ. ಎಷ್ಟೋ ಹಳ್ಳಿಗಳು ಇಂಥ ಕ್ಷುಲ್ಲಕ ಕಾರಣಕ್ಕೆ ದ್ವೇಷದ ದಳ್ಳುರಿಯಲ್ಲಿ ಬೇಯುತ್ತಿವೆ. ಇದು ಭಾರತದ ಹಳ್ಳಿಗಳ ದುರಂತ ಎಂಬುದನ್ನು ಮಾಯಾಲೋಕ ಧ್ವನಿಸುತ್ತದೆ.

೩

ಬರಗಾಲದ ಚಿತ್ರಣ ಕಾದಂಬರಿಯಲ್ಲಿ ವಿವರವಾಗಿದೆ. ರಾಜ್ಯದೆಲ್ಲೆಡೆ ಮಳೆಯ ಅಭಾವದಿಂದ ಆವರಿಸಿದ್ದ ಬರಗಾಲದ ಸ್ಥಿತಿಗತಿಗಳು ಕಾದಂಬರಿಯಲ್ಲಿ ಜೀವಂತವಾಗಿ ದಾಖಲಾಗಿವೆ. ಬರಗಾಲ ತಂದೊಡ್ಡಿದ ಸಂಕಷ್ಟಗಳು, ತೋಟಗಾರಿಕಾ ಬೆಳೆಗಳ ಮೇಲೆ ಬರಗಾಲದ ತೀವ್ರ ಪರಿಣಾಮ, ಅದರಲ್ಲೂ ಏಲಕ್ಕಿ, ಕಾಫಿ, ಬೆಳೆಗಳಿಗೆ ಬರಗಾಲದ ಕಾರಣದಿಂದ ಒದಗಿದ ಧಾರುಣ ಸ್ಥಿತಿ. ಕಾದಂಬರಿಯಲ್ಲಿ ಚಿತ್ರಿತವಾಗಿವೆ. ಸ್ವತಃ ಕಾಫಿ ಬೆಳೆಗಾರರಾಗಿದ್ದ ತೇಜಸ್ವಿಗೆ ಬರಗಾಲದ ಅನುಭವ ಸರಿಯಾಗಿಯೇ ಆಗಿತ್ತು. ಆ ಧಾರುಣತೆಯನ್ನು ತೇಜಸ್ವಿ ಹೀಗೆ ಚಿತ್ರಿಸುತ್ತಾರೆ

"ದಿನಾ ಬೆಳಿಗ್ಗೆ ದಟ್ಟವಾದ ಮಂಜು ಬೀಳುತ್ತಿತ್ತು. ಸಾಧಾರಣವಾಗಿ ಏಪ್ರಿಲ್‌ನಲ್ಲಿ ಬರುವ ಕಾಫಿ ಹೂವಿನ ಮಳೆ ಬರಲೇ ಇಲ್ಲ. ರೇವತಿ, ರೋಹಿಣಿ, ಭರಣಿ, ಯಾವ ಮಳೆಯೂ ಇಲ್ಲ. ಕಾಫಿ ಬೆಳೆಯುವವರಿಗೆ ಇದೊಂದು ಬಹುದೊಡ್ಡ ಕಂಟಕ. ಪ್ರತಿವರ್ಷ ಏಪ್ರಿಲ್ ತಿಂಗಳಲ್ಲಿ ಅವರ ತಲೆಯ ಮೇಲೆ ಈ ತೂಗುವ ಕತ್ತಿ ನೇತಾಡುತ್ತಲೇ ಇರುತ್ತದೆ. ಸಾಕಷ್ಟು ನೀರಿದ್ದ ದೊಡ್ಡ ತೋಟಗಳವರು ನೀರು ಸಿಂಪರಣೆ ಮಾಡಿ ಸ್ವಲ್ಪವಾದರೂ ಫಸಲನ್ನು ದಕ್ಕಿಸಿಕೊಳ್ಳುತ್ತಾರೆ. ಸಣ್ಣಪುಟ್ಟವರು ಮಾತ್ರ ಹೂವಿನ ಮಳೆ ಸರಿಯಾಗಿ ಬರದಿದ್ದರೆ ಆ ಷರ್ಷ ಅವರ ಬಾಯಿಗೆ ಮಣ್ಣೆ. ಆದರೆ ಈ ವರ್ಷ ಹಾಗಲ್ಲ, ಮೂರು ವರ್ಷದ ಬರಗಾಲ ಸಣ್ಣವರು, ಪುಟ್ಟವರು, ದೊಡ್ಡವರು, ಕಂಪನಿಯವರು ಎಲ್ಲರಿಗೂ ಸೇರಿಸಿ ಒಟ್ಟಿಗೇ ಬಾಯಿಗೆ ಮಣ್ಣು ಹಾಕಿತ್ತು. ಸಿಂಪರಿಸುವುದಕ್ಕೂ ಎಲ್ಲೂ ನೀರಿಲ್ಲದೆ ನೀರಿಗಾಗಿ ಪ್ರತಿದಿನ ಅಹೋರಾತ್ರಿ ಕುರುಕ್ಷೇತ್ರ ಶುರುವಾಗುತ್ತಿತ್ತು. ನನ್ನ ತೋಟದಲ್ಲಿ ಕಾಫಿ ಮೊಗ್ಗುಗಳು ಮಳೆಗಾಗಿ ಕಾಯ್ದು ಕಾಯ್ದು ಕೊನೆಗೆ ದಟ್ಟ ಮಂಜಿನ ಪ್ರಭಾವಲಯದಿಂದಲೋ ಏನೋ ಮುಂದೆ ಬಂದರೂ ಅರಳದೆ ನಿಧಾನವಾಗಿ ಕೆಂಚಾಗಿ ಉದುರಿಹೋಗಲು ಶುರುವಾಯ್ತು. ಕಾಫಿ ಗಿಡದ ಕಾಂಡವನ್ನು ಮೆಲ್ಲಗೆ ತಟ್ಟಿದರೆ ಬತ್ತ ಉದುರಿದ ಹಾಗೆ ಒಣಗಿದ ಮೊಗ್ಗುಗಳು ತೊಟ್ಟು ಕಳಚಿ ಮಳೆ ಹನಿಗಳಂತೆ ಉದುರುತ್ತಿದ್ದವು. ನನಗಂತೂ ಕಾಫಿ ಫಸಲಿಗೆ ತಿಲಾಂಜಲಿ ಕೊಟ್ಟು ಖರ್ಚು ವೆಚ್ಚ ಆದಷ್ಟೂ ಕಡಿಮೆ ಮಾಡಿಕೊಳ್ಳುವುದು ಅನಿವಾರ್ಯವಾಗಿತ್ತು. ಕಾಫಿಯದು ಈ ಕಥೆಯಾದರೆ ಏಲಕ್ಕಿಯದು ಇನ್ನೂ ದೊಡ್ಡ ದುರಂತ. ಕಾಫಿಯಲ್ಲಿ ಫಸಲಿಲ್ಲವೆಂಬ ಕೊರತೆಯಾದರೆ ಏಲಕ್ಕಿಯಲ್ಲಿ ಗಿಡವೇ ಇಲ್ಲ! ಏಲಕ್ಕಿ ಕಾಂಡ ತಾಯಿಬೇರು, ಕಾಂಡ ಕೊಂಬೆಗಳಿಲ್ಲದ ಬಾಳೆ ಜಾತಿಯಗಿಡ. ನೀರಿಲ್ಲದೆ ಗಿಡ ಬಾಡಿದರೆ ಬರೀ ಎಲೆಗಳು ಬಾಡುವುದಿಲ್ಲ. ಇಡೀ ಗಿಡವೇ ನೆಲಕ್ಕೆ ಬೀಳುತ್ತದೆ. ಗಿಡಗಳು ಈ

ಹಂತ ತಲುಪಿದ ಮೇಲೆ ಅವುಗಳನ್ನು ಕಿತ್ತೆಸೆದು ಬೇರೆ ಸಸಿಗಳನ್ನು ನೆಟ್ಟು ಮತ್ತೆ ಮೂರು ವರ್ಷ ಕಾಯುವುದಲ್ಲದೆ ಇನ್ನು ಯಾವ ಮಾರ್ಗವೂ ಇರುವುದಿಲ್ಲ. ಮೂರು ವರ್ಷ ಬರದಿಂದ ಪ್ರತಿವರ್ಷವೂ ಸತ್ತಗಿಡಗಳನ್ನು ಕಿತ್ತು ನೆಟ್ಟು ಎಲ್ಲರೂ ಸುಸ್ತಾಗಿ ನನಗಿಂತ ಮೊದಲೇ ಏಲಕ್ಕಿಗೆ ವಿದಾಯ ಹೇಳಿದ್ದರು" (ಮಾಯಾಲೋಕ-೧, ಪುಟ-೨೦೫, ೨೦೬, ಪ್ರ. ಪುಸ್ತಕ ಪ್ರಕಾಶನ, ಎರಡನೆ ಮುದ್ರಣ-೨೦೦೬, ಲೇ. ಕೆ.ಪಿ.ಪೂರ್ಣಚಂದ್ರ ತೇಜಸ್ವಿ)

ಬರಗಾಲದ ಸಂದರ್ಭದಲ್ಲಿ ನೀರಿಗೆ ಬಂದೊದಗಿದ ಅಭಾವವನ್ನು ಮಾಯಾಲೋಕ ತೆರೆದಿಡುತ್ತದೆ. ಕಳೆದ ಕೆಲವು ವರ್ಷಗಳ ಹಿಂದೆ ಮಳೆಯ ತೀರ್ವ ಕೊರತೆಯಿಂದ ರಾಜ್ಯವ್ಯಾಪಿ ಆವರಿಸಿದ ಭೀಕರ ಬರ, ಈ ಕಾರಣದಿಂದ ಎಲ್ಲೆಡೆ ಭುಗಿಲೆದ್ದ ಕುಡಿಯುವ ನೀರಿಗೆ ಆಹಾಕಾರ, ನೀರಿಗಾಗಿ ಜನರ ಬೀದಿ ಜಗಳ, ಎಲ್ಲವೂ ಮಾಯಾಲೋಕದ ಮಾಯೆಯಲ್ಲಿ ಸೇರಿ ಹೋಗಿವೆ. "ಬರಗಾಲದ ಬಿಸಿಗೆ ಬಯಲುಸೀಮೆ ಹಳ್ಳಿಗಳೆಲ್ಲಾ ನಲುಗಿ ಹೋಗಿದ್ದವು. ಯಾವ ಕೊಳವೆ ಬಾವಿಗಳಲ್ಲೂ ನೀರಿರಲಿಲ್ಲ. ಅಲ್ಪಸ್ವಲ್ಪ ನೀರಿದ್ದ ಕೊಳವೆ ಬಾವಿಗಳ ಬಳಿ ಕೊಡ ಇಟ್ಟುಕೊಂಡು ಕುಳಿತ ಹೆಂಗಸರು ನೀರಿಗಾಗಿ ಜುಟ್ಟು ಹಿಡಿದು ಜಗಳವಾಡುತ್ತಿರುವ ದೃಶ್ಯ ಬಸ್ಸಿನಲ್ಲಿ ಸಾಗುವ ಪ್ರಯಾಣಿಕರಿಗೆ ಸರ್ವೇಸಾಮಾನ್ಯವಾಗಿ ಕಾಣುತ್ತಿತ್ತು. ಬಯಲು ಸೀಮೆಯಲ್ಲಿದ್ದ ಅಡಕೆ ಮತ್ತು ತೆಂಗಿನ ತೋಟಗಳಲ್ಲಿ ಬಹಳಷ್ಟು ಒಣಗಿ, ತೋಟ ಖಾಲಿ ಕಂಬಗಳ ಸಮೂಹದಂತೆ ಕಾಣುತ್ತಿತ್ತು. ಸಂಶೋಧನ ಕೇಂದ್ರದ ಸೈಂಟಿಸ್ಟ್, ಪ್ರೊಫೆಸರ್ ಮೂರ್ತಿ 'ಅನೇಕ ಶತಮಾನಗಳಿಂದ ಶೇಖರವಾಗಿದ್ದ ಅಂತರ್ಜಲವನ್ನೆಲ್ಲಾ ಸಿಕ್ಕಾಪಟ್ಟೆ ಗುಂಡಿ ಕೊರೆದು ಯದ್ವಾತದ್ವ ಉಪಯೋಗಿಸಿದ್ದೇವೆ. ಅಂತರ್ಜಲಕ್ಕೆ ಆಗಿರುವ ಹಾನಿ ಒಂದೆರಡು ಮಳೆಗಾಲದಿಂದ ರಿಪೇರಿಯಾಗುತ್ತದೆ ಎಂದು ಖಂಡಿತಾ ತಿಳಿಯಬೇಡಿ' ಎಂದು ರೈತರಿಗೆ ಕಟುವಾಗಿಯೇ ಎಚ್ಚರಿಸಿದ್ದರು. ಇನ್ನೂರಡಿ ಮುನ್ನೂರಡಿ ಗುಂಡಿ ತೆಗೆಸಿ ಕೊಳವೆ ಇಳಿಸಿದ್ದ ರೈತರು ಸಹ ನಾಲ್ಕು ಬೊಗಸೆ ನೀರು ಎತ್ತುವುದರೊಳಗೇ ಬಾವಿ ಖಾಲಿಯಾಗಿದ್ದನ್ನು ನೋಡಿ ಹೌಹಾರಿದ್ದರು. ಆದರೆ ಬರದ ಬಿಸಿ ಕೇವಲ ಬಯಲುಸೀಮೆಗೆ ಮಾತ್ರ ಪರಿಮಿತವಾಗಿರಲಿಲ್ಲ. ನಿಧಾನವಾಗಿ ಮಲೆನಾಡಿನಲ್ಲೂ ಗುಡ್ಡದ ಕಣಿವೆಗಳ ದಟ್ಟ ಕಾಡಿನಿಂದ ಹರಿದು ಬರುತ್ತಿದ್ದ ಝರಿ, ತೊರೆ, ಹಳ್ಳಗಳ ನೀರು ಕಡಿಮೆಯಾಗಲು ಶುರುವಾಯ್ತು. ಕರ್ನಾಟಕದ ಎಲ್ಲ ಜೀವ ನದಿಗಳೂ ಹುಟ್ಟುವ ಇಲ್ಲಿ ನೀರಿನ ಒರತೆಗಳೆಲ್ಲಾ ಬತ್ತಿ ಜಲದ ಸೆಲೆ ಅಂತರ್ಧಾನವಾಗುತ್ತದೆ ಎಂದು ಯಾರೂ ಊಹಿಸಿರಲಿಲ್ಲ." (ಮಾಯಾಲೋಕ-೧, ಪುಟ-೮೯ ಪ್ರ. ಪುಸ್ತಕ ಪ್ರಕಾಶನ, ಎರಡನೆ ಮುದ್ರಣ-೨೦೦೬, ಲೇ. ಕೆ.ಪಿ.ಪೂರ್ಣಚಂದ್ರ ತೇಜಸ್ವಿ)

ಅಂದರೆ ಬರದ ತೀರ್ವತೆ ಕೇವಲ ಬಯಲುಸೀಮೆಗಷ್ಟೇ ಸೀಮಿತವಾಗಿರಲಿಲ್ಲ. ದಟ್ಟಕಾಡಿನ ಮಲೆನಾಡಿಗೂ ವಿಸ್ತರಿಸಿತ್ತು. ನೀರಿನ ಅವಾವರವೇ ಆಗಿದ್ದ ಮಲೆನಾಡು ಕೂಡ ನೀರಿನ ಕೊರತೆ ಎದುರಿಸಬೇಕಾಯ್ತು. ತೇಜಸ್ವಿ ತೀವ್ರ ಬರಗಾಲದ ಈ ಚಿತ್ರಣವನ್ನು ಕೊಡುತ್ತಲೇ ಅದಕ್ಕೆ ಕಾರಣವನ್ನೂ ಹೇಳಿಬಿಡುತ್ತಾರೆ. ಅಷ್ಟೇ ಅಲ್ಲ ಒಬ್ಬ ಪರಿಸರ ವಿಜ್ಞಾನಿಯಾಗಿದ್ದ ತೇಜಸ್ವಿ ಈ ಅಪಾಯ ಇನ್ನೂ ಮುಂದುವರಿಯುವುದನ್ನು 'ಅನೇಕ ಶತಮಾನಗಳಿಂದ ಶೇಖರವಾಗಿದ್ದ ಅಂತರ್ಜಲವನ್ನೆಲ್ಲಾ ಸಿಕ್ಕಾಪಟ್ಟೆ ಗುಂಡಿ ಕೊರೆದು ಯದ್ವಾತದ್ವ ಉಪಯೋಗಿಸಿದ್ದೇವೆ. ಅಂತರ್ಜಲಕ್ಕೆ ಆಗಿರುವ ಹಾನಿ ಒಂದೆರಡು

ಮಳೆಗಾಲದಿಂದ ರಿಪೇರಿಯಾಗುತ್ತದೆ ಎಂದು ಖಂಡಿತಾ ತಿಳಿಯಬೇಡಿ' ಎಂದು ಎಚ್ಚರಿಸುತ್ತಾರೆ ಇದು ಭವಿಷ್ಯದಲ್ಲಿ ನೀರಿಗೆ ಉಂಟಾಗಲಿರುವ ತೀವ್ರತರದ ಕೊರತೆಗೆ ಮುನ್ನುಡಿಯಂತಿದೆ.

೪

ಭ್ರಷ್ಟಾಚಾರ ನಮ್ಮ ದೇಶಕ್ಕಂಟಿರುವ ಶಾಪ. ಎಲ್ಲ ಕ್ಷೇತ್ರಗಳಲ್ಲಿ ಎಲ್ಲ ಹಂತಗಳಲ್ಲಿ ಭ್ರಷ್ಟಾಚಾರವಿದೆ. ಆದರೆ ಎಲ್ಲರೂ ಮೇಲ್ಮಟ್ಟದ ಅಂದರೆ ದೊಡ್ಡ ದೊಡ್ಡ ಅಧಿಕಾರಿಗಳ, ರಾಜಕಾರಣಿಗಳ ಭ್ರಷ್ಟಾಚಾರದ ಬಗ್ಗೆ ಮಾತ್ರ ಮಾತನಾಡುತ್ತಾರೆ. ಆದರೆ ಅತ್ಯಂತ ಕೆಳಮಟ್ಟದಲ್ಲಿರುವ ಭ್ರಷ್ಟಾಚಾರವನ್ನು ತೇಜಸ್ವಿ ಮಾಯಾಲೋಕದಲ್ಲಿ ಶೋಧಿಸಿದ್ದಾರೆ. ಒಡ್ಡರ ತಿಮ್ಮಾಬೋಯಿ ದೂರವಾಣಿ ಇಲಾಖೆಯ ಓಎಫ್‌ಸಿ ಕೇಬಲ್ ಹಾಕಲು ಗುಂಡಿ ತೆಗೆಯುವ ಕೆಲಸವನ್ನು ತೆಗೆದುಕೊಂಡಾಗ ತಿಮ್ಮಾಬೋಯಿಗೆ ಒಪ್ಪಿಸಲಾಗಿತ್ತು. ಪಾಪ ಅವರ ಕಷ್ಟವನ್ನು ಅವರ ಬಾಯಿಂದಲೇ ಕೇಳಿ "....ಅದ್ರಾಗೆ ನಮಗೆ ಸಿಕ್ಕೋದೇ ಮೂರ್‍ಕಾಸು ಅದ್ರಾಗೂ ಮೇಲಿಂದ ಕೆಳಗಿನವರಿಗೆ ಪಾಲು ಕೇಳ್ತಾರೆ ಕೊಡದೇ ಇದ್ದರೆ ಕೆಲಸ ನೋಡಿ ಬಿಲ್ಲು ಪಾಸ್ ಮಾಡ್ತೀವಿ ಅಂತ ಬಂದು ಇಲ್ಲಿ ಆಳ ಇಲ್ಲ. ಅಗಲ ಕಮ್ಮಿ ಮಾಡಿದ್ದಿಯ ಅಂತ ತಕ್ರಾರು ತೆಗೆದು ದುಡ್ಡು ಕೊಡೊದು ತಡಾ ಮಾಡ್ತಾರೆ! ಈ ಬಿಸ್ಲಾಗೆ ಮಗು ಸೊಂಟದಮೇಲೆ ಇಟ್ಕೊಂಡು ನಾವು ಎಷ್ಟಂತ ಇವರ ಹಿಂದೆ ತಿರುಗೋಕಾಗ್ತದೆ ಹೇಳಿ ಸ್ವಾಮಿ. ಅದ್ಕೇ ನಾವು ಆ ಗೋಳೇ ಬ್ಯಾಡಾಂತ ಕೆಲಸ ಕೈದು ಮಾಡಿಬಿಟ್ವು. (ಮಾಯಾಲೋಕ-೧, ಪುಟ-೨೨-೨೩ ಪ್ರ. ಪುಸ್ತಕ ಪ್ರಕಾಶನ, ಎರಡನೆ ಮುದ್ರಣ-೨೦೦೬, ಲೇ. ಕೆ.ಪಿ.ಪೂರ್ಣಚಂದ್ರ ತೇಜಸ್ವಿ)

ತಿಮ್ಮಾಬೋಯಿ ಬಡ ಕೂಲಿಕಾರ. ಅವತ್ತಿನ ಊಟಕ್ಕೆ ಅಂದಿನ ಕೂಲಿಯೇ ಆಧಾರ. ಇವರು ಜನ್ಮತಃ ಒಡ್ಡರಾದ್ದರಿಂದ ಅತ್ಯಂತ ಶ್ರಮ ಜೀವಿಗಳು. ಬೆವರು ಸುರಿಸಿ ದುಡಿದರೂ ಜೀವನ ನಿರ್ವಹಣೆಗಿಂತ ಹೆಚ್ಚಿನದನೇನನ್ನೂ ಮಾಡಲು ಸಾಧ್ಯವಿಲ್ಲ. ಹೀಗಿರುವ ತಿಮ್ಮಾಬೋಯಿಗೆ ದೂರವಾಣಿ ಇಲಾಖೆಯ ಓಎಫ್‌ಸಿ ಕೇಬಲ್ ಹಾಕಲು ಗುಂಡಿ ತೆಗೆಯುವ ಗುತ್ತಿಗೆಯನ್ನು ಒಪ್ಪಿಸಲಾಗಿದೆ. ಇವನಿಗೆ ನೀಡಿರುವ ಗುತ್ತಿಗೆ ಹೆಚ್ಚು ಅಂದರೆ ಕೆಲವು ಸಾವಿರಗಳನ್ನು ದಾಟುವುದಿಲ್ಲ. ಇದರಲ್ಲಿ ದಿನದ ಕೂಲಿ ಹೊರತುಪಡಿಸಿ ಸ್ವಲ್ಪ ಲಾಭ ಸಿಕ್ಕರೆ ಹೆಚ್ಚು. ಇಂಥ ಸಣ್ಣ ಪ್ರಮಾಣದ ಗುತ್ತಿಗೆಯ ಮೇಲೂ ಭ್ರಷ್ಟ ಅಧಿಕಾರಿಗಳ ಕಣ್ಣು. ಬಡಪಾಯಿ ತಿಮ್ಮಾಬೋಯಿಯ ಮೇಲೂ ಭ್ರಷ್ಟಾಚಾರದ ಕರಿನೆರಳು. ಬಡ ಜನರು ದುಡಿದು ತಿನ್ನುವ ಅನ್ನವನ್ನೂ ಕಸಿಯಷ್ಟು ತೀರ ಕೆಳಮಟ್ಟಕ್ಕೆ ಭ್ರಷ್ಟಾಚಾರ ಇಳಿದಿದೆ ಎನ್ನುವುದನ್ನು ತೇಜಸ್ವಿ ಮಾಯಾಲೋಕದಲ್ಲಿ ಕಟ್ಟಿಕೊಡುತ್ತಾರೆ. ಭಾರತದಲ್ಲಿ ಸರ್ಕಾರಿ ಅಧಿಕಾರಿಗಳ ಮಟ್ಟದಲ್ಲಿ ಯಾವ ಸ್ವರೂಪದ ಭ್ರಷ್ಟಾಚಾರವಿದೆ ಎಂಬುದಕ್ಕೆ ಈ ಘಟನೆಯೇ ಸಾಕ್ಷಿ.

೫

ಸರ್ಕಾರಿ ಅಧಿಕಾರಿಗಳ ಕಾರ್ಯವೈಖರಿಯಲ್ಲಿರುವ ಜೊಳ್ಳುತನವನ್ನು ತೇಜಸ್ವಿ ಇಲ್ಲಿ ಚೆನ್ನಾಗಿಯೇ ಚಿತ್ರಿಸಿದ್ದಾರೆ. ಜೆಇ ಮಲ್ಲಿಕಾರ್ಜುನನ ದುರ್ವರ್ತನೆ, ಕೆಇಬಿಯ ಇತರೆ ಅಧಿಕಾರಿಗಳು, ಹಾಗೆ ತಹಸೀಲ್ದಾರರ ಬೇಜವಾಬ್ದಾರಿತನ ಎಲ್ಲವೂ ಸರ್ಕಾರಿ ಅಧಿಕಾರಿಗಳ ವರ್ತನೆಯನ್ನು ದಾಖಲಿಸುವ ಘಟನೆಗಳು, ಕುಡಿಯುವ ನೀರಿಗಾಗಿ ಹಳ್ಳಕ್ಕೆ ಅಡ್ಡಗಟ್ಟೆ ಹಾಕಿದ್ದಾರೆಂದೂ, ಅದನ್ನು ತೆರವು ಮಾಡಿಸಬೇಕೆಂದು ಮಕ್ಕಿಗದ್ದೆ ಗ್ರಾಮಸ್ಥರು ಇಕ್ಬಾಲ್‌ಸಾಬಿಯ ಜೊತೆಗೂಡಿ ತಹಸೀಲ್ದಾರರ ಬಳಿ

ಹೋದಾಗ ಅವರ ಕೋರಿಕೆಗೆ ಸಮರ್ಪಕ ಉತ್ತರ ನೀಡದೆ "ನೋಡ್ರೀ ನಾನು ಬಂದು ಸ್ಪಾಟ್ ಇನ್‌ಸ್ಪೆಕ್ಷನ್ ಮಾಡಬೇಕಾದ್ದು ಏನಿದೆ ಅಲ್ಲಿ? ಯಾರೂ ಹರಿಯುವ ಹಳ್ಳಕ್ಕೆ ಪಂಪ್‌ಸೆಟ್ ಹಾಕಿಲ್ಲವಲ್ಲ! ಹಳ್ಳಕ್ಕೆ ಕಟ್ಟೆಕಟ್ಟಿ ಅಡ್ಡ ತಿರುಗಿಸಿದ್ದಾರೆ ಅಂತ ತಾನೇ ನಿಮ್ಮ ಪುಕಾರು. ಹಾರೆ ತಗೊಂಡು ಹೋಗಿ ನೀವೇ ಕಟ್ಟೆ ಒಡೆದು ನೀರಿಗೆ ಸೀದಾ ದಾರಿ ಮಾಡಿಕೊಡಿ. ಇಂಥ ಚಿಲ್ಲರೆ ಪುಕಾರುಗಳನ್ನೆಲ್ಲ ತಗೊಂಡು ನಾನು ಹಾರೆ ಹಿಡಿದುಕೊಂಡು ಬರೋದಕ್ಕೆ ಮಣ್ಣುಒಡ್ಡರ ಕೆಲಸ ಮಾಡಿಕೊಂಡು ಇಲ್ಲೀದ್ದೀನಿ ಅಂತ ತಿಳ್ಕೊಂಡ್ರಾ?" (ಮಾಯಾಲೋಕ-೧, ಪುಟ-೧೯೨, ೧೯೩, ಪ್ರ. ಪುಸ್ತಕ ಪ್ರಕಾಶನ, ಎರಡನೆ ಮುದ್ರಣ-೨೦೦೬, ಲೇ. ಕೆ.ಪಿ.ಪೂರ್ಣಚಂದ್ರ ತೇಜಸ್ವಿ)
ಎಂದು ಪುಕಾರು ಕೊಟ್ಟ ಮಕ್ಕಿಗದ್ದೆಯವರ ಮೇಲೇ ತಹಸೀಲ್ದಾರರು ರೇಗಿದರು. ಇದು ಉನ್ನತ ಹುದ್ದೆಯಲ್ಲಿರುವ ಸರ್ಕಾರಿ ಅಧಿಕಾರಿಗಳು ಜನಸಾಮಾನ್ಯರ ಸಮಸ್ಯೆಗಳಿಗೆ ಸ್ಪಂದಿಸುವ ಪರಿ.

೬

ಹಕ್ಕಿಪಿಕ್ಕಿಗಳೆಂಬ ಅಲೆಮಾರಿ ಜನಾಂಗದ ಚಿತ್ರಣ ಮಾಯಾಲೋಕದಲ್ಲಿ ಬರುತ್ತದೆ. ಹಕ್ಕಿಗಳನ್ನು ಬೇಟೆಯಾಡುವುದರಲ್ಲಿ ಅವರಿಗಿರುವ ಪ್ರಾವೀಣ್ಯತೆಯನ್ನು ನೋಡಿ ಈ ಪಾರಂಪರಿಕ ಪ್ರಾವೀಣ್ಯತೆಯ ಬಗ್ಗೆ ಹೆಮ್ಮೆ ಎನಿಸುತ್ತದೆ. ಅದೇ ಸಂದರ್ಭದಲ್ಲಿ ಹಕ್ಕಿಪಿಕ್ಕಿಗಳ ವಾಸದ ಚಿತ್ರಣವನ್ನು ಕಂಡಾಗ ಅವರ ಬಗ್ಗೆ ಮರುಕವುಂಟಾಗುತ್ತದೆ. " ಅಲ್ಲೆಲ್ಲಾ ಮುಂಗುಸಿ, ನರಿ, ಉಡು ಮೊದಲಾದ ಕಾಡು ಪ್ರಾಣಿಗಳ ಚರ್ಮ ಮೂಳೆ ಇತ್ಯಾದಿ ಅವಶೇಷಗಳು ಚದುರಿಕೊಂಡು ಬಿದ್ದಿದ್ದವು. ಪುಕ್ಕ ತಿಪ್ಪಳಿಸಿ ವಿಕಾರವಾಗಿದ್ದ ಹುಂಡುಕೋಳಿಗಳೂ ಒಂದಷ್ಟು ಬಿದ್ದಿದ್ದವು. ಮಣ್ಣಿನಲ್ಲಿ ಒಣಿ ಮಾಡಿ ಒಲೆ ಮಾಡಿಕೊಂಡಿದ್ದರು. ಅದರ ಮೇಲೊಂದು ಚಕ್ಕುಬಿದ್ದು ವಿಕಾರವಾಗಿದ್ದ ಪಾತ್ರೆಯಲ್ಲಿ ಅನ್ನವೋ ಗಂಜಿಯೋ ಕುದಿಯುತ್ತಾ ಇತ್ತು. ಮೂಗಿನಲ್ಲಿ ಸಿಂಬಳ ಸುರಿಯುತ್ತಾ ಮೂರು ಜನ ಮಕ್ಕಳು ನಮ್ಮ ಗಲಾಟೆಯನ್ನು ಮುಗ್ಧ ಕಣ್ಣುಗಳಿಂದ ದಿಟಸುತ್ತಾ ಇದ್ದರು. ಅವರ ದೈನ್ಯಾವಸ್ಥೆ, ಕೃಶ ಶರೀರ ಹರಕಲು ಬಟ್ಟೆ ಇವನ್ನೆಲ್ಲಾ ನೋಡಿ ನನಗೆ ಅವರ ಮೇಲಿನ ಸಿಟ್ಟೆಲ್ಲಾ ಸಂಪೂರ್ಣ ಇಳಿದು ಹೋಯ್ತು. ಅವರು ನಾಶವಾಗುತ್ತಿರುವ ವನ್ಯ ಜೀವಿಗಳಿಗಿಂತ ಭಿನ್ನವಾಗೇನೂ ಕಾಣಲಿಲ್ಲ." (ಮಾಯಾಲೋಕ-೧, ಪುಟ-೬, ಪ್ರ. ಪುಸ್ತಕ ಪ್ರಕಾಶನ, ಎರಡನೆ ಮುದ್ರಣ-೨೦೦೬, ಲೇ. ಕೆ.ಪಿ.ಪೂರ್ಣಚಂದ್ರ ತೇಜಸ್ವಿ)

ಹಕ್ಕಿಪಿಕ್ಕಿಗಳ ಅನ್ನಕ್ಕೂ ಪರದಾಡುವ ದುಸ್ಥಿತಿ, ತೊಡಲು ಬಟ್ಟೆಯಿಲ್ಲದ ಬೆತ್ತಲೆದೇಹ, ಸರಿಯಾದ ಆಹಾರವಿಲ್ಲದೆ ಸೊರಗಿಹೋದ ಮಕ್ಕಳು, ಚಕ್ಕು ಹಿಡಿದು ವಿಕಾರವಾದ ಪಾತ್ರೆ-ಇವೆಲ್ಲ ಹಕ್ಕಿಪಿಕ್ಕಿಗಳ ದಟ್ಟ ದಾರಿದ್ರ್ಯವನ್ನು ಅನಾವರಣ ಮಾಡುತ್ತವೆ. ಇದು ಎಂಥವರನ್ನೂ ಮರುಗುವಂತೆ ಮಾಡುತ್ತದೆ. ಹೃದಯವನ್ನು ಕಲಕುತ್ತದೆ. ಈ ಅಲೆಮಾರಿಗಳ ಅತಂತ್ರ ಬದುಕಿನ ವಿವರಗಳು ಸಹೃದಯನ ಹೃದಯವನ್ನು ಭಾರವಾಗಿಸುತ್ತವೆ. ಹಕ್ಕಿಗಳ ಬೇಟೆಯೇ ಜೀವನಾಧಾರವಾಗಿದ್ದ ಹಕ್ಕಿಪಿಕ್ಕಿಗಳು ಆಧುನಿಕತೆಯ ಹೊಡೆತಕ್ಕೆ ಸಿಕ್ಕು ನಾಶವಾಗಿದ್ದರೆ ಕಾಡುಗಳು ಕಣ್ಮರೆಯಾಗಿ ಹಕ್ಕಿಗಳೇ ಇಲ್ಲದಂತಾಗಿದೆ. ಸರ್ಕಾರದ ಅಸಮರ್ಪಕ ಕಾನೂನುಗಳು ಇವರ ಬದುಕನ್ನು ಛಿದ್ರಗೊಳಿಸಿವೆ. ಹೀಗಾಗಿ ಹಕ್ಕಿಪಿಕ್ಕಿಗಳ ಬದುಕು ಅವನತಿ ಹೊಂದುತ್ತಿರುವ ವನ್ಯ ಜೀವಿಗಳಿಗಿಂತ ಭಿನ್ನವಾಗಿ ಕಾಣುವುದಿಲ್ಲ.

ಸಾಮಾಜಿಕ ತಾತ್ಸಾರಕ್ಕೆ ಒಳಗಾದ ಹಕ್ಕಿಪಿಕ್ಕಿಗಳೆಂಬ ಅವಸಾನದ ಅಂಚಿನಲ್ಲಿರುವ ಜನಾಂಗವೊಂದರ ಧಾರುಣತೆಯನ್ನು ಮಾಯಾಲೋಕ ಚಿತ್ರಿಸುತ್ತದೆ.

ಹಕ್ಕಿಪಿಕ್ಕಿಗಳದು ಅಲೆಮಾರಿ ಬದುಕು. ಇವರಿಗೆ ತಮ್ಮದೇ ಭೂಮಿ ಇರುವುದಿಲ್ಲ. ದುಡಿದು ತಿನ್ನುವುದನ್ನು ಇವರ ವಂಶ ಕಲಿಸಿರುವುದಿಲ್ಲ. ಯಾವುದೂ ಇವರ ಸ್ವಂತ ನೆಲೆಯಲ್ಲ. ಊರೂರು ತಿರುಗುವುದೇ ಇವರ ಜಾಯಮಾನ. ಹಾಗೆಂದು ಇವರು ವ್ಯಾಪಾರಿಗಳೇನು ಅಲ್ಲ. ಕೆಲವು ಜನಾಂಗಗಳು ಊರೂರು ಅಲೆದು ವ್ಯಾಪಾರ ನಡೆಸುತ್ತವೆ. ಆದರೆ ಈ ಜನಾಂಗ ಬದುಕಲೆಂದೇ ಊರೂರು ಸುತ್ತುತ್ತವೆ. ಒಂದು ಊರಿಗೆ ಹೋಗುವುದು ಊರಿನ ಯಾವುದೋ ಒಂದು ಜಾಗದಲ್ಲಿ ಟೆಂಟು ಹಾಕಿಕೊಂಡು ಅಲ್ಲಿರುವ ಕೆಲ ಪ್ರಾಣಿ-ಪಕ್ಷಿಗಳನ್ನು ಹಿಡಿದು ತಿನ್ನುವುದು, ಅಲ್ಲಿ ಬೇಟೆಗೆ ಮತ್ತೇನೂ ಸಿಗುವುದಿಲ್ಲ ಎಂದಾಗ ಅಲ್ಲಿಂದ ಬೇರೊಂದು ಊರಿಗೆ ಹೊರಡುವುದು. ಇದೇ ಅವರ ಬದುಕು. ಇವರಲ್ಲಿ ದುಷ್ಚಟಗಳಿಗೇನೂ ಕಡಿಮೆಯಿಲ್ಲ. ಅವರಿವರು ತಮ್ಮ ಹೊಲಗಳಲ್ಲಿ ಉಪದ್ರವಿ ಪ್ರಾಣಿ-ಪಕ್ಷಿಗಳನ್ನು ಹಿಡಿಯಿರಿ ಎಂದು ಕೊಡುವ ಅಲ್ಪ ಸ್ವಲ್ಪ ಹಣವನ್ನು ಸಂಜೆಯಾಗುತ್ತಲೇ ಕುಡಿದು ಮುಗಿಸುವುದು, ಬಿಕ್ಷೆ ಬೇಡಿ ತಿನ್ನುವುದು. ಇವನ್ನೆಲ್ಲ ನೋಡಿದರೆ ಅವರ ದಾರಿದ್ರ್ಯಕ್ಕೆ ಬಹುತೇಕ ಅವರೇ ಕಾರಣರು ಎನಿಸುತ್ತದೆ. ಹಕ್ಕಿಪಿಕ್ಕಿಗಳು ತಮ್ಮ ಬದುಕಿನಲ್ಲಿ ತಾವೇ ಬದಲಾವಣೆ ಮಾಡಿಕೊಳ್ಳದಿದ್ದಲ್ಲಿ ಒಂದೆಡೆ ನೆಲೆ ನಿಂತು ಮರ್ಯಾದೆಯಿಂದ ಬದುಕಲು ಸಾಧ್ಯವಿಲ್ಲ. ಸರ್ಕಾರವೂ ಈ ಜನಾಂಗದ ಒಳಿತಿಗೆ ಯೋಜನೆಗಳನ್ನು ರೂಪಿಸಬೇಕಿದೆ. ಹಕ್ಕಿಪಿಕ್ಕಿಗಳ ಪರಕಲು ಬದುಕನ್ನು ಚಿತ್ರಿಸುವ ತೇಜಸ್ವಿ ಅವರು ಒಂದೆಡೆ ನೆಲೆ ನಿಲ್ಲಬಲ್ಲಂಥ ಬದುಕಿನ ಮಾರ್ಪಾಡುಗಳನ್ನು ಏಕೆ ಸೂಚಿಸಲಿಲ್ಲ ಎನ್ನುವ ಪ್ರಶ್ನೆಯೂ ಕಾಡುತ್ತದೆ. ಅಂದರೆ ತೇಜಸ್ವಿ ಅತಂತ್ರ ಹಕ್ಕಿಪಿಕ್ಕಿಗಳನ್ನು ಅನುಕಂಪದಲ್ಲಿ ಮಾತ್ರವೇ ನೋಡುತ್ತಿದ್ದಾರೆ ಎನಿಸುತ್ತದೆ

೭

ಕೃಷಿಯಲ್ಲಿ ನಂಬಿಕೆ ಆಸಕ್ತಿ ಹೊಂದಿದ್ದ ತೇಜಸ್ವಿ ಮೂಡಿಗೆರೆಗೆ ನಡೆದು ತಮ್ಮ ಭೂಮಿಯನ್ನು ಹತ್ತಾರು ಪ್ರಯೋಗಗಳ ಪ್ರಯೋಗಾಲಯವನ್ನಾಗಿ ಮಾಡಿದರು. ಆಧುನಿಕ ಕೃಷಿ ಮೇಲೆ ಅನುಮಾನ ಹೊಂದಿದ್ದ ತೇಜಸ್ವಿಗೆ ಸಾವಯವ ಕೃಷಿ ಮೇಲೆ ನಂಬಿಕೆ ಇತ್ತು. ಪರಿಸರಕ್ಕೆ ತೀರಾ ಹತ್ತಿರವಿದ್ದ ಫುಕುವೋಕನ 'ಸಹಜ ಕೃಷಿ' ಮೇಲೂ ತೇಜಸ್ವಿಗೆ ಆಸಕ್ತಿ ಇತ್ತು. ಸಹಜ ಕೃಷಿಯನ್ನು ಜನಪ್ರಿಯಗೊಳಿಸಲು ಫುಕುವೋಕನ ಚಿಂತನೆ ಹಾಗೂ ಸಹಜ ಕೃಷಿಯ ವಿಧಾನಗಳನ್ನು ಸಂಗ್ರಹವಾಗಿ ಕನ್ನಡಕ್ಕೆ ತಂದರು. ಸಹಜ ಕೃಷಿ ಮೇಲೆ ತೇಜಸ್ವಿಗಿದ್ದ ಆಸಕ್ತಿ ಮಾಯಾಲೋಕದಲ್ಲೂ ವ್ಯಕ್ತವಾಗಿದೆ.

" ಏನ್ಮಾಡ್ತಿಯ! ರೈತರು ಗೌರ್ಮೆಂಟು ಗೊಬ್ರ ಹಾಕೋದಕ್ಕೆ ಶುರು ಮಾಡಿದ ಮೇಲೆ ತರ್ಕಾರಿ ಗುಣನೇ ತಳ್ಕಂಪಳ್ಕ ಆಗೋಗಿದೆ. ಕಣ್ಣಿಗೆ ನೋಡಕೆ ಗಿಲೀಟಾಗಿರ್ತವೆ! ತಿಂದ್ರೆ ರುಚಿನೇ ಇರೋಲ್ಲ! ಏನ್ಮಾಡ್ತಿಯಾ! ಎಲ್ಲಾ ಗೌರ್ಮೆಂಟು ಗೊಬ್ರ" (ಮಾಯಾಲೋಕ-೧, ಪುಟ-೩೧, ಪ್ರ. ಪುಸ್ತಕ ಪ್ರಕಾಶನ, ಎರಡನೆ ಮುದ್ರಣ-೨೦೦೬, ಲೇ. ಕೆ.ಪಿ.ಪೂರ್ಣಚಂದ್ರ ತೇಜಸ್ವಿ)

ಈ ಮಾತುಗಳಲ್ಲಿ ತೇಜಸ್ವಿಗೆ ಸಹಜ ಕೃಷಿಯಲ್ಲಿದ್ದ ನಂಬಿಕೆ ಮಾತ್ರ ಕಾಣುವುದಿಲ್ಲ ಬದಲಿಗೆ ಆಧುನಿಕ ಎಂದು ಹೇಳುವ ಈಗಿನ ಕೃಷಿಯ ನಿಸ್ಸಾರತೆಯೂ, ಅದರ ಸತ್ವಹೀನತೆಯೂ ಏಕಕಾಲದಲ್ಲಿ

ಗೋಚರವಾಗುತ್ತವೆ. ಹೆಚ್ಚಿನ ಫಸಲು ತೆಗೆಯಬೇಕೆಂಬ ಹುಚ್ಚಿನಲ್ಲಿ ಇಂದಿನ 'ಆಧುನಿಕ ಕೃಷಿಕರು' ಹೆಚ್ಚಿನ ಪ್ರಮಾಣದಲ್ಲಿ ರಸಗೊಬ್ಬರಗಳನ್ನು ಬಳಸುತ್ತಿದ್ದಾರೆ. ಇದರಿಂದ ಭೂಮಿ ತನ್ನ ಮೂಲ ಫಲವತ್ತತೆಯನ್ನೇ ಕಳೆದುಕೊಂಡು ಬರಡಾಗುತ್ತಿದೆ. ಕೃಷಿ ಉತ್ಪನ್ನಗಳು ತಮ್ಮ ಸತ್ವವನ್ನು ಕಳೆದುಕೊಂಡು ನಿಸ್ಸಾರವಾಗುತ್ತಿವೆ. ಇನ್ನೂ ಅತಿರೇಕ ಅಂದರೆ ಆಧುನಿಕ ಕೃಷಿ ಹೆಸರಿನಲ್ಲಿ ಸಾವಿರಾರು ರೂಪಾಯಿಗಳನ್ನು ಸುರಿಯುತ್ತಿದ್ದರೂ ಆದರ Output ಕಡಿಮೆಯಾಗಿ ರೈತರು ಸಾಲ ಮಾಡಿ ಸುರಿದ ಹಣಕ್ಕೆ ತಮ್ಮ ಜೀವಗಳನ್ನೇ ಬಲಿ ನೀಡುತ್ತಿದ್ದಾರೆ. ಇದನ್ನು ಮನಗಂಡ ಭಾರತದ ಸಹಜಕೃಷಿ ಮಾಂತ್ರಿಕ ಪಾಳೇಕರ್ ದೇಶದಾದ್ಯಂತ ಶೂನ್ಯ ಬಂಡವಾಳದ ಸಹಜ ಕೃಷಿಯನ್ನು ಪರಿಚಯಿಸುತ್ತಿದ್ದಾರೆ. ಒಟ್ಟಿನಲ್ಲಿ ಆಧುನಿಕ ಕೃಷಿಯ ದೀರ್ಘಕಾಲೀನ ಪರಿಣಾಮಗಳನ್ನು ಈ ಮಾತುಗಳು ಧ್ವನಿಸುತ್ತವೆ.

೮

ಆಧುನಿಕ ಸಮಾಜದ ಅವಿಭಾಜ್ಯ ಅಂಗವಾಗಿರುವ, ಸಮಾಜದ ಕನ್ನಡಿಯಾಗಬೇಕಿರುವ, ನೊಂದವರ ದನಿಯಾಗಬೇಕಿರುವ ಮಾಧ್ಯಮಗಳನ್ನು ಕುರಿತು ತೇಜಸ್ವಿ ತೀವ್ರವಾಗಿ ಟೀಕಿಸುತ್ತಾರೆ. ಅವುಗಳ ಕಾರ್ಯವೈಖರಿಯನ್ನು ಬಹಳ ಸೂಕ್ಷ್ಮವಾಗಿ ವಿಡಂಬಿಸಿದ್ದಾರೆ. ಮಾಧ್ಯಮಗಳ ಅದರಲ್ಲೂ ಪತ್ರಿಕಾ ಮಾಧ್ಯಮದ ಒಟ್ಟು ಸ್ವರೂಪ ಮತ್ತು ಧೋರಣೆಗಳನ್ನು ತೇಜಸ್ವಿ ಮಾಯಾಲೋಕದಲ್ಲಿ ಸಮರ್ಥವಾಗಿ ಪ್ರತಿಬಿಂಬಿಸಿದ್ದಾರೆ. ಇಂದಿನ ಮಾಧ್ಯಮಗಳಲ್ಲಿ ಅಂದರೆ ಪತ್ರಿಕೆ ಮತ್ತು ಟಿವಿಗಳಲ್ಲಿ ಬರುವ ಸುದ್ದಿ ಅಥವಾ ವರದಿಗಳು ಎಷ್ಟು ನಿಜ? ಎಂಬ ನಿಟ್ಟಿನಲ್ಲಿ ಈ ವಿಡಂಬನೆ ವಿಶ್ಲೇಷಿಸುತ್ತವೆ. ಮಾಧ್ಯಮಗಳಲ್ಲಿ ಬಿತ್ತರವಾಗುವ ಅಥವಾ ಮುದ್ರಣವಾಗುವ ಸುದ್ದಿಗಳೆಲ್ಲ ಯೋಜಿತ (planned) ಎಂಬ ಸತ್ಯವನ್ನು ಈ ವಿಶ್ಲೇಷಣೆ ಹೊರಗೆಡವುತ್ತದೆ.

ಘಟಿಸಿದ ಸುದ್ದಿಗಳನ್ನೆ ತಮಗೆ ಬೇಕಾದ ರೀತಿಯಲ್ಲಿ ರೂಪಿಸಿಕೊಂಡು ಪ್ರಕಟಿಸುತ್ತವೆ. ಇಲ್ಲಿನ ಮಾತುಗಳನ್ನು ನೋಡಿ "ಹೀಗೆ ಫೋಟೋ ತೆಗೆದರೆ ಯಾರಾದರೂ ಇದನ್ನ ಮುಷ್ಕರದ ಫೋಟೋ ಅಂತಾರೇನ್ರಿ! ಹಾಗೇ ನಿಂತಿದ್ದರಲ್ಲ ಹಾಗೆ ಗುಂಪುಕೂಡಿ ನಿಲ್ಲಬೇಕು. ಪತ್ರಿಕೆಗೆ ಬೆಂಕಿ ಹಚ್ಚುತ್ತಾ ಇರೋದು ಫೋಟೋದಲ್ಲಿ ಬೀಳೋಹಾಗೆ ಜಾಗ ಕೊಡಿ. ಕ್ಯಾಮೆರಾಕ್ಕೆ ಮಾತ್ರ ಅಡ್ಡ ಬರಬೇಡಿ"
(ಮಾಯಾಲೋಕ-೧, ಪುಟ-೧೭೬, ಪ್ರ. ಪುಸ್ತಕ ಪ್ರಕಾಶನ, ಎರಡನೆ ಮುದ್ರಣ-೨೦೦೬, ಲೇ. ಕೆ.ಪಿ.ಪೂರ್ಣಚಂದ್ರ ತೇಜಸ್ವಿ)
ಎಂದು ಪ್ರಕಾಶ ತನ್ನ ವರದಿಗೆ ಬೇಕಾದ ಫೋಟೋಗೆ ಪ್ರತಿಭಟನಾಕಾರರನ್ನು ತನಗೆ ಬೇಕಾದ ರೀತಿ ನಿಲ್ಲಿಸಿ ಫೋಟೋ ತೆಗೆಯುತ್ತಾನೆ. ಆದರೆ ಇದನ್ನು ಪತ್ರಿಕೆಯಲ್ಲಿ ನೋಡುವ ಜನ ನಿಜವೆಂದೇ ಭಾವಿಸುತ್ತಾರೆ. ಇಲ್ಲಿ ಪ್ರಕಾಶ ತನಗೆ ಬೇಕಾದ ಸುದ್ದಿಯನ್ನು ತನಗೆ ಬೇಕಾದ ರೀತಿಯಲ್ಲಿ ರೂಪಿಸಿಕೊಳ್ಳುತ್ತಿದ್ದಾನೆಂದೇ ಇದರ ಅರ್ಥ. ಇದು ಇಂದಿನ ಬಹುತೇಕ ಮಾಧ್ಯಮಗಳು ಬಹುತೇಕ ಸುದ್ದಿಗಳನ್ನು ರೂಪಿಸಿಕೊಳ್ಳುವ ಪರಿ.

ಸುದ್ದಿಗಳನ್ನು ರೋಚಕವಾಗಿ ಪ್ರಕಟಿಸುವುದು ಇಂದಿನ ಬಹುತೇಕ ಮಾಧ್ಯಮಗಳು ಅನುಸರಿಸಿಕೊಂಡು ಬಂದಿರುವ ಸಂಪ್ರದಾಯ. ಇಲಿ ಹೊಡೆದರೆ ಹುಲಿ ಹೊಡೆದರು ಎಂಬಂತೆ

ಪ್ರಕಟಿಸಿ ಆ ಸುದ್ದಿಗೊಂದು ಮಹತ್ವ ನೀಡಿ ಸಾರ್ವಜನಿಕರ ಗಮನ ಸೆಳೆಯುವುದು, ಆ ಮೂಲಕ ತಮ್ಮ ಪ್ರಸಾರ ಸಂಖ್ಯೆಯನ್ನು ಹೆಚ್ಚಿಸಿಕೊಳ್ಳುವುದು ಮತ್ತು ಟಿವಿಯಾದರೆ ತಮ್ಮ ವೀಕ್ಷಕರ ಸಂಖ್ಯೆಯನ್ನು ಹೆಚ್ಚಿಸಿಕೊಳ್ಳುವುದು ಈಗಿನ ಮಾಧ್ಯಮಗಳ ತಂತ್ರ.

ಎಂಎಲ್‌ಎ ಮಾರಪ್ಪನ ಎದುರೇ ಉಗ್ರಪ್ಪ ಜೇಇ ಮಲಿಕಾರ್ಜನ ಕೊರಳಪಟ್ಟಿ ಹಿಡಿದಿದ್ದನ್ನೇ 'ರೈತ ನಾಯಕರಿಂದ ಜೇಇಗೆ ಕಪಾಳಮೋಕ್ಷ ! ಸ್ಥಳೀಯ ಎಂಎಲ್‌ಎ ಎದುರೇ ಸ್ಥೈರಣೆ ಕಳೆದುಕೊಂಡ ರೈತನಾಯಕರಿಂದ ಪ್ರತಿಭಟನೆ' ಎಂದು ಪ್ರಕಾಶ ತನ್ನ ಪ್ರಕಾಶವಾಣಿಯಲ್ಲಿ ಪ್ರಕಟಿಸಿಯೇಬಿಟ್ಟ. ಇದರಿಂದ ತನ್ನ ಪತ್ರಿಕೆಯ ಪ್ರಸಾರವನ್ನು ಹೆಚ್ಚಿಸಕೊಳ್ಳುವುದಷ್ಟೇ ಪ್ರಕಾಶನ ಉದ್ದೇಶ. ಪ್ರಕಾಶ ತನ್ನ ಪತ್ರಿಕೆ ನಡೆಸಲಾಗದೆ ನಿಲ್ಲಿಸಬೇಕೆಂದು ನಿರ್ಧರಿಸಿದಾಗ ಕಾರ್ಮಿಕ ನಾಯಕ ಡೆಲ್ಫಿ ಪ್ರಕಾಶನಿಗೆ ಹೇಳುವ ಬುದ್ಧಿವಾದ ಇಂದಿನ ಮಾಧ್ಯಮದ ಮನೋಧರ್ಮವನ್ನು ಬಹಳ ಸಮರ್ಥವಾಗಿ ಪ್ರತಿನಿಧಿಸುತ್ತದೆ. "ಯಾವುದಾದರೂ ಒಂದು ಪಾರ್ಟಿಗೆ ಸಪೋರ್ಟ ಮಾಡಿದರೆ ಅವಾಗ ಅವರು ನಿನಗೆ ಸಪೋರ್ಟ ನೀಡ್ತಾರೆ. ನಮ್ಮ ಎಂಎಲ್‌ಎಗೆ ಬೆಂಬಲ ನೀಡಿದ್ದರೆ ಸರ್ಕಾರಿ ಜಾಹಿರಾತನ್ನಾದರೂ ಕೊಡಿಸುತ್ತಿರಲಿಲ್ಲವಾ!" (ಮಾಯಾಲೋಕ-೧, ಪುಟ-೧೪೦,೧೪೧, ಪ್ರ. ಪುಸ್ತಕ ಪ್ರಕಾಶನ, ಎರಡನೆ ಮುದ್ರಣ-೨೦೦೬, ಲೇ. ಕೆ.ಪಿ.ಪೂರ್ಣಚಂದ್ರ ತೇಜಸ್ವಿ)

ಹೀಗೆ ಡೆಲ್ಫಿ ಪ್ರಕಾಶನಿಗೆ ಹೇಳುವ ಮಾತು ಇಂದಿನ ಪತ್ರಿಕೆಗಳು ಜಾಹಿರಾತಿಗಾಗಿ ಏನು ಮಾಡುತ್ತವೆ ಎಂಬುದು ತಿಳಿಯುತ್ತದೆ. ಜಾಹಿರಾತಿಗಾಗಿ ಯಾವುದೊ ಪಕ್ಷಕ್ಕೆ ಬೆಂಬಲ ನೀಡೋ ಪತ್ರಿಕೆಗಳು ಆ ಪಕ್ಷಗಳ ವಿರುದ್ಧ ಬರೆಯುವುದಾದರೂ ಹೇಗೆ? ಅವರ ಯಾವುದೇ ಅನ್ಯಾಯ ಅಕ್ರಮಗಳಿಗೆ ಆ ಪತ್ರಿಕೆಯಲ್ಲಿ ಕ್ಷಮೆಯಿದೆ ಎಂದಾಯಿತು. ಎಲ್ಲ ಪತ್ರಿಕೆಗಳೂ ಅಥವಾ ಚಾನೆಲ್‌ಗಳು ಒಂದಲ್ಲ ಒಂದು ಪಕ್ಷದ ಬೆಂಬಲಕ್ಕೆ ನಿಂತರೆ ಪತ್ರಿಕೋದ್ಯಮದ ನಿಜವಾದ ಧ್ಯೇಯ ಈಡೇರುವುದಾದರೂ ಎಲ್ಲಿ? ಉತ್ತಮ ಸಮಾಜ ನಿರ್ಮಾಣವಾಗುವುದಾದರೂ ಹೇಗೆ? ಒಟ್ಟಿನಲ್ಲಿ ಡೆಲ್ಫಿಯ ಮಾತು ಇಂದಿನ ಪತ್ರಿಕೋದ್ಯಮದ ಕಮರ್ಷಿಯಲ್ ಧೋರಣೆಯನ್ನು ಧ್ವನಿಸುತ್ತದೆ.

ಜೇಇ ಮಲ್ಲಿಕಾರ್ಜುನನಿಗೆ ಉಗ್ರಪ್ಪ ಹೊಡೆದ ಎಂಬ ಸುದ್ದಿಯನ್ನು ಸಂಪಾದಕ ಪ್ರಕಾಶ ಆ ಸುದ್ದಿಯ ಸತ್ಯಾ ಸತ್ಯತೆಯನ್ನು ತಿಳಿಯಲು ಜೇಇ ಕಚೇರಿಗೆ ಹೋದಾಗ ಅಲ್ಲಿದ್ದ ಗುಮಾಸ್ತ "ಪತ್ರಿಕೆ ಆಫೀಸಿಗೆ ಬರೋ ವರ್ತಮಾನವನ್ನೆಲ್ಲ ಒಂದೊಂದನ್ನೂ ಸುಳ್ಳೊ ನಿಜವೋ ಅಂತ ತನಿಖೆ ಮಾಡ್ತಾ ಹೋದರೆ ಪತ್ರಿಕೆ ನಡೆಸಕೆ ಆಗುತ್ತಾ ಹೇಳಿ. ಲಂಚಗುಳಿಗಳು ಲಂಚ ತೆಗೆದುಕೊಂಡು ರಸೀದಿ ಕೊಡ್ತಾರೇನ್ರೀ?" (ಮಾಯಾಲೋಕ-೧, ಪುಟ-೧೪೫, ಪ್ರ. ಪುಸ್ತಕ ಪ್ರಕಾಶನ, ಎರಡನೆ ಮುದ್ರಣ-೨೦೦೬, ಲೇ. ಕೆ.ಪಿ.ಪೂರ್ಣಚಂದ್ರ ತೇಜಸ್ವಿ) ಎಂದು ಹೇಳುವ ಮಾತುಗಳು ಪತ್ರಿಕೆಗಳು ಪ್ರಕಟಿಸುತ್ತಿರುವ ಸುದ್ದಿಗಳ ಸತ್ಯಾಂಶದ ಬಗ್ಗೆ ಅನುಮಾನ ಮೂಡಿಸುವುದಲ್ಲದೆ ಶೇ ನೂರರಷ್ಟು ಸತ್ಯದ ಸುದ್ದಿಗಳನ್ನೇ ಪ್ರಕಟಿಸುವಲ್ಲಿ ಪತ್ರಿಕೆಗಳಿಗಿರುವ ಮಿತಿಗಳನ್ನೂ ಸ್ಪಷ್ಟಪಡಿಸುತ್ತದೆ. ಜೊತೆಗೆ ಪತ್ರಿಕೋದ್ಯಮದ ಧ್ಯೇಯದ ಇಂದಿನ ಪ್ರಸ್ತುತತೆಯನ್ನೇ ಇದು ಪ್ರಶ್ನಿಸುತ್ತದೆ. ಒಂದು ಪತ್ರಿಕೆಗೆ ತನ್ನ ಕಛೇರಿಗೆ ಬರುವ ಸುದ್ದಿ ನಿಜವೊ ಸುಳ್ಳೋ ಎಂದು ತನಿಖೆ ಮಾಡಲು ಸಾಧ್ಯವಿಲ್ಲ ಎಂದಾದರೆ ತಪ್ಪು

ಸುದ್ದಿಗಳನ್ನು ಪ್ರಕಟಿಸುವುದು, ಆ ಮೂಲಕ ಸಮಾಜಕ್ಕೆ ತಪ್ಪು ಸಂದೇಶ ಕೊಡುವುದು ಎಷ್ಟು ಸರಿ! ಇರಲಿ ಇದು ಸಧ್ಯದ ಚರ್ಚೆಯಲ್ಲ. ಮಾಯಾಲೋಕ ಇಂಥ ಪ್ರಶ್ನೆಗಳನ್ನು ಎತ್ತುತ್ತದೆ ಎನ್ನುವುದೇ ಇಲ್ಲಿನ ಪ್ರಸ್ತುತತೆ.

ಮಾಧ್ಯಮಗಳ ಮತ್ತೊಂದು ಮುಖ ನೋಡಿ "ಅಲ್ಲಯ್ಯಾ ಸುದ್ದಿನೇ ನಿನ್ನ ಪತ್ರಿಕೆಯ ಜೀವ. ಈಗ ನೀನು ಟಿಬಿ ಸುದ್ದಿ ಹಾಕಿದ್ದಕ್ಕೆ ತಾನೆ ಎಲ್ಲಾ ಮುಗಿಬಿದ್ದು ಮೂರುದಿನ ಹಿಂದಿನ ಪೇಪರ್ ಹುಡುಕಿಕೊಂಡು ಓಡಾಡ್ತಿರೋದು. ಬೇರೆ ಬೇರೆ ಪೇಪರಿನವರೆಲ್ಲ ನಿನ್ನ ಪೇಪರಿನ ಸುದ್ದಿ ಕ್ಯಾರಿ ಮಾಡ್ತಿರೋಮು? ನಮಗೆ ಈಗ ನಿನ್ನ ಪೇಪರ್ ಹಿತಾಸಕ್ತಿ ಮುಖ್ಯ. ಎಲ್ಲ ತಣ್ಣಗಾದ ಮೇಲೆ ನಿನ್ನ ಪೇಪರೂ ತಣ್ಣಗಾಗುತ್ತೆ. ಏನೇ ಆಗಲಿ ಇದನ್ನ ತಣ್ಣಗಾಗೋದಕ್ಕೆ ಬಿಡಬಾರದು"
(ಮಾಯಾಲೋಕ-೧, ಪುಟ-೧೮೧, ಪ್ರ. ಪುಸ್ತಕ ಪ್ರಕಾಶನ, ಎರಡನೆ ಮುದ್ರಣ-೨೦೦೬, ಲೇ. ಕೆ.ಪಿ.ಪೂರ್ಣಚಂದ್ರ ತೇಜಸ್ವಿ)

"ಪೇಪರ್ ಬರೇ ಸುದ್ದಿ ವರದಿ ಮಾಡೋದಕ್ಕೆ ಅಲ್ಲ ಕಣೋ, ಸುದ್ದಿ ಸೃಷ್ಟಿ ಆಗೋಹಂಗೆ ಮಾಡೋದು ಮುಖ್ಯ. ತಣ್ಣಗಿರೋದು ಯಾರಿಗೆ ಬೇಕಾಗಿದೆ ಅಂತೀಯ? ವಿದ್ಯುತ್ ಸಂಘದವರಿಗೂ ಬೇಕಾಗಿಲ್ಲ, ರೈತಸಂಘದವರಿಗೂ ಬೇಕಾಗಿರೋಲ್ಲ. ಎಲ್ಲರೂ ತಮ್ಮ ಬಲಾಬಲ ಪ್ರದರ್ಶನಕ್ಕೆ ಕಾಯ್ತಿರ್ತಾರೆ. ನೀನು ಠುಸ್ ಅನ್ನಿಸಿಬಿಟ್ಟರೆ ಅವರ ಮೂಡೂ ಹಾಳು" (ಮಾಯಾಲೋಕ-೧, ಪುಟ-೧೮೧, ಪ್ರ. ಪುಸ್ತಕ ಪ್ರಕಾಶನ, ಎರಡನೆ ಮುದ್ರಣ-೨೦೦೬, ಲೇ. ಕೆ.ಪಿ.ಪೂರ್ಣಚಂದ್ರ ತೇಜಸ್ವಿ)

ಡೆಲ್ಫಿ ಪ್ರಕಾಶನಿಗೆ ಹೇಳುವ ಈ ಬುದ್ಧಿಮಾತುಗಳು ಇಂದಿನ ಮಾಧ್ಯಮಗಳು ಕೇವಲ ಘಟಿಸಿದ ಸುದ್ದಿಗಳನ್ನು ಪ್ರಕಟಿಸುವುದಷ್ಟೇ ಅಲ್ಲ ಸುದ್ದಿಯನ್ನು ಸೃಷ್ಟಿಸಿ ಪ್ರಕಟಿಸುತ್ತವೆ. ಅಂದರೆ ಇಲ್ಲಿ ಸುದ್ದಿ ವಾಹಕಗಳು ಸುದ್ದಿ ಪ್ರಚೋದಕಗಳೂ ಆಗಿವೆ. ಜೊತೆಗೆ ಘಟಿಸಿದ ಸುದ್ದಿಗಳನ್ನು ತಿರುಚಿ ರೋಚಕವಾಗಿ ಬರೆದು ಸುದ್ದಿಯ ಕಾವನ್ನು ಜೀವಂತವಾಗಿರಿಸಲು ಪ್ರಯತ್ನಿಸುತ್ತವೆ. ಜನತೆಗೆ ಆ ಘಟನೆಯ ಬಗೆಗೆ ಕುತೂಹಲವನ್ನು ಹೆಚ್ಚಿಸುತ್ತಾ, ಆ ಕುತೂಹಲವನ್ನು ಜೀವಂತವಾಗಿರಿಸಲು ಸದಾ ಪ್ರಯತ್ನಶೀಲವಾಗಿರುತ್ತವೆ. ಆ ಮೂಲಕ ತಮ್ಮ ಪತ್ರಿಕೆಗೆ ಬೇಡಿಕೆ ಹೆಚ್ಚಿಸಿಕೊಳ್ಳುವ ಹುನ್ನಾರ ಪತ್ರಿಕೆಗಳದು. ಪತ್ರಿಕೆಗಳ ಕಮರ್ಷಿಯಲ್ ಧೋರಣೆಯೇ ಇದಕ್ಕೆಲ್ಲ ಕಾರಣ.

ಇದೆಲ್ಲ ಒಟ್ಟು ಮಾಧ್ಯಮದ ಪರಿಸ್ಥಿತಿಯಾದರೆ ಸ್ಥಳೀಯ ಪತ್ರಿಕೆಗಳ ಪಾಡೇ ಬೇರೆ. ತೇಜಸ್ವಿ ಮಾಯಾಲೋಕದಲ್ಲಿ ಕೇವಲ ಸ್ಥಳೀಯ ಪತ್ರಿಕೆಯ ಬಗ್ಗೆ ಮಾತನಾಡಿದ್ದಾರಾದರೂ ಅದು ಕೇವಲ ಸ್ಥಳೀಯ ಪತ್ರಿಕೆಯ ಧೋರಣೆಯಲ್ಲ. ಹಾಗಾಗಿ ಆ ಸ್ಥಳೀಯತೆಗಿರುವ ವ್ಯಾಪಕತೆಯನ್ನು ಕಡೆಗಣಿಸಲು ಸಾಧ್ಯವಿಲ್ಲ. ನಿರ್ಧಿಷ್ಟವಾಗಿ ಲೋಕಲ್ ಪತ್ರಿಕೆಯನ್ನೇ ಕುರಿತು ಮಾತನಾಡುವುದಾದರೆ, ಪ್ರಕಾಶನ ಪ್ರಕಾಶವಾಣಿ, ಜೀವ ಹಿಡಿದುಕೊಂಡು ಬದುಕಿರುವ ಹಲವು ಸ್ಥಳೀಯ ಪತ್ರಿಕೆಗಳ ರೂಪಕ. ಜಿಲ್ಲಾ ಮಟ್ಟದ ಪ್ರಸಾರ ಮತ್ತು ಸುದ್ದಿಯನ್ನವಲಂಬಿಸಿರುವ ಪತ್ರಿಕೆಗಳನ್ನು ಸ್ಥಳೀಯ ಪತ್ರಿಕೆಗಳೆಂದು ಗುರ್ತಿಸಲಾಗುತ್ತದೆ. ಕರ್ನಾಟಕದಲ್ಲಿ ಇಂಥ ಸಾವಿರಾರು ಪತ್ರಿಕೆಗಳಿವೆ. ಇವುಗಳಿಗೆ ಎಲ್ಲವೂ ಕೊರತೆಯೇ. ಹಣದ ಕೊರತೆ, ಸುದ್ದಿಗಳ ಕೊರತೆ, ಜಾಹಿರಾತುಗಳ ಕೊರತೆ(ಸರ್ಕಾರಿ ಜಾಹಿರಾತುಗಳೇ ಆಧಾರ), ಕೊನೆಗೆ ಓದುಗರ ಕೊರತೆ ಕೂಡ. ಈ ಎಲ್ಲ ಕೊರತೆಗಳ ನಡುವೆ ಕೆಲವರಿಗೆ ಕೇವಲ

ಬದುಕಿಗೊಂದು ಮಾರ್ಗವಾಗಿ, ಕೆಲವರಿಗೆ ಪ್ರತಿಷ್ಠೆಯ ಸಂಕೇತವಾಗಿ ಹೇಗೋ ನಡೆದುಕೊಂಡು ಹೋಗುತ್ತವೆ.

ಎಲ್ಲ ಸ್ಥಳೀಯ ಪತ್ರಿಕೆಗಳೂ ಈ ರೀತಿ ಇರುತ್ತವೆ ಎಂದೇನಿಲ್ಲ. ಕೆಲವು ಬೆರಳೆಣಿಕೆಯ ಪತ್ರಿಕೆಗಳು ಹಲವು ದಶಕಗಳಿಂದ ಲಾಭದಲ್ಲಿ, ಅಷ್ಟೇ ಅಲ್ಲ ಜಿಲ್ಲೆಯ ಕನ್ನಡಿಯಾಗಿ ಮುನ್ನಡೆಯುತ್ತಿವೆ. ಉಳಿದ ಬಹುತೇಕ ಪತ್ರಿಕೆಯ ಸ್ಥಿತಿ ಪ್ರಕಾಶನ ಪ್ರಕಾಶವಾಣಿಗಿಂತ ಭಿನ್ನವಾಗಿಲ್ಲ. ಇನ್ನೇನು ಮುಚ್ಚುವುದರಲ್ಲಿದ್ದ ಪ್ರಕಾಶವಾಣಿ ಟಿಬಿ ಸುದ್ದಿಯನ್ನು ರೋಚಕವಾಗಿ ತಿರುಚಿ ಬರೆದಾಗಿನಿಂದ ತನ್ನ ಪ್ರಸಾರ ಸಂಖ್ಯೆಯನ್ನು ಹೆಚ್ಚಿಸಿಕೊಳ್ಳುತ್ತದೆ. ಅಂದರೆ ಪ್ರಕಾಶ ಹೆಚ್ಚು ಪ್ರೊಫೆಷನಲ್ ಆಗಿದ್ದಕ್ಕೆ ಸುದ್ದಿಯನ್ನು ಹಾಗೆ ಬರೆಯಲು ಸಾಧ್ಯವಾಯಿತು. ಜೊತೆಗೆ ಸುದ್ದಿಯನ್ನು ತಿರುಚುವ, ರೋಚಕವಾಗಿ ಬರೆಯುವಂಥ ಪ್ರೊಫೆಷನಲಿಸಮ್ ಪತ್ರಿಕೆಯೊಂದರ ಉಳಿವಿಗೆ ಅಗತ್ಯ ಎನ್ನುವ ಆತ್ಯಂತಿಕ ಧೋರಣೆಯೂ ಇಲ್ಲಿ ವ್ಯಕ್ತವಾಗುವುದನ್ನು ಗಮನಿಸಬಹುದು. ಒಟ್ಟಿನಲ್ಲಿ ಸ್ಥಳೀಯ ಪತ್ರಿಕೆಯೊಂದು ಸುದ್ದಿಗಾಗಿ ಪರದಾಡುವ ಮತ್ತು ತನ್ನ ಅಸ್ಥಿತ್ವಕ್ಕಾಗಿ ಹೋರಾಡುವ, ಈ ಹೋರಾಟದ ತೀವ್ರತೆಯಲ್ಲಿ ಅದು ಸುದ್ದಿಗಳನ್ನು ತಿರುಚುವ, ಸೆನ್ಸೇಷನ್ ಕ್ರಿಯೇಟ್ ಮಾಡುವ ಹುನ್ನಾರಗಳು ಎಲ್ಲ ಸ್ಥಳೀಯ ಪತ್ರಿಕೆಗಳ ಕೈಗನ್ನಡಿಯಂತೆ ಕಾಣುತ್ತದೆ. ಇದು ಪತ್ರಿಕೋಧ್ಯಮದ ದುರಂತವೂ ಹೌದು, ಪತ್ರಿಕೆಗಳು ಹೆಚ್ಚು ಮಾರ್ಡನೈಸ್ ಆಗುತ್ತಿರುವ ಲಕ್ಷಣವೂ ಹೌದು.

೬

ತೇಜಸ್ವಿಗೆ ಜಾತಿ ಧರ್ಮಗಳ ವಿಚಾರದಲ್ಲಿ ತಟಸ್ಥ ಮನೋಭಾವವಿತ್ತು. ಅದನ್ನು ಮೀರಬೇಕೆಂಬ ಆಶಯವೂ ಇತ್ತು. ಅಂತರ್ಜಾತೀಯ ವಿವಾಹಗಳು ಹೆಚ್ಚಾಗಬೇಕು, ಜಾತಿವ್ಯವಸ್ಥೆ ತೊಲಗಬೇಕು ಅಂತಿದ್ದರು ತೇಜಸ್ವಿ. ಬಜ್ಜಿ ಫಾತಿಮಾ ಧರ್ಮವನ್ನು ಮೀರಿದ ದಿಟ್ಟ ಹೆಂಗಸಾಗಿ ಮಾಯಾಲೋಕದಲ್ಲಿ ಗಮನ ಸೆಳೆಯುತ್ತಾಳೆ. "ಬುರುಕಾ ಹಾಕಿಕೊಂಡು ವ್ಯಾಪಾರ ಮಾಡಬೇಕು ಎಂದು ಹೇಳಿದ್ದಕ್ಕೆ ಜಮಾತೆನವರಿಗೆ ಹೀನಾಮಾನ ಬಯ್ದಿದ್ದಳಂತೆ. ಹಿಂದುಗಳೇ ಬಹುಸಂಖ್ಯಾತರಾಗಿರುವ ಗೊಂದಲಗೇರಿಯಲ್ಲಿ ತಾನು ಬುರ್ಖಾ ತೊಟ್ಟುಕೊಂಡು ಜಾತಿಯನ್ನೇ ಮುಂದೆಮಾಡಿದರೆ ವ್ಯಾಪಾರಕ್ಕೆ ಕಲ್ಲು ಬೀಳುತ್ತದೆ ಎಂದು ಅವಳಿಗೆ ಸೂಕ್ಷ್ಮವಾಗಿ ಅನ್ನಿಸಿದ್ದರಿಂದಲೇ ಅವಳು ಸೀರೆ ಸುತ್ತಿಕೊಂಡು ವ್ಯಾಪಾರಕ್ಕೆ ಕುಳಿತಿದ್ದು. ಒಮ್ಮೊಮ್ಮೆ ಕುಂಕುಮ ಸಹ ಇಟ್ಟುಕೊಂಡು ಬರುತ್ತಿದ್ದಳು. ಶರೀಯತ್ ಕಾನೂನು ಅವಳ ಮೇಲೆ ಚಲಾಯಿಸಲು ಹೋದ ಜಮಾತೆಯವರು ಅವಳು ಹಲ್ಲು ಕಡಿಯುತ್ತಾ ತಿರುಗಿ ಬಿದ್ದಿದ್ದು ನೋಡಿ ಅವಸರದಲ್ಲಿ ಜಾಗ ಖಾಲಿ ಮಾಡಿದ್ದರು" (ಮಾಯಾಲೋಕ–೧, ಪುಟ–೨೯, ಪ್ರ. ಪುಸ್ತಕ ಪ್ರಕಾಶನ, ಎರಡನೆ ಮುದ್ರಣ–೨೦೦೬, ಲೇ. ಕೆ.ಪಿ.ಪೂರ್ಣಚಂದ್ರ ತೇಜಸ್ವಿ)

ಬದುಕಿಗಾಗಿ ಹೋರಾಡುವ ಹೆಂಗಸೊಬ್ಬಳು ಧರ್ಮದ ವಿರುದ್ಧ ತಿರುಗಿಬಿದ್ದಿರುವುದನ್ನು ಈ ಭಾಗ ಅದ್ಭುತವಾಗಿ ಧ್ವನಿಸುತ್ತದೆ. ಇಷ್ಟೇ ಅಲ್ಲದೆ ಈ ಭಾಗ ಇನ್ನೂ ಹಲವು ದೃಷ್ಟಿಕೋನಗಳಿಂದ ಮಹತ್ವ ಪಡೆಯುತ್ತದೆ. ಧರ್ಮಕ್ಕಿಂತ ಬದುಕು ದೊಡ್ಡದು ಎಂಬ ಮಾನವೀಯ ತತ್ವವೊಂದು ಇಲ್ಲಿ ಅನಾವರಣಗೊಂಡಿದೆ. ಧರ್ಮ ಎನ್ನುವುದು ಉತ್ತಮವಾಗಿ ಬದುಕು ಸಾಗಿಸಲು ಮತ್ತು ಬದುಕಿಗೊಂದು ಶಿಸ್ತು ರೂಪಿಸಲು ನಾವೇ ನಿರ್ಮಿಸಿಕೊಂಡ ಕೆಲವು ನಿಯಮಗಳ ಸಮುಚ್ಚಯ. ಹೀಗಿರುವಾಗ ಆ ಧರ್ಮದಿಂದಲೇ ನಮ್ಮ ಬದುಕಿಗೆ ಕಂಟಕ ಬರುವುದಾದರೆ ಅಂಥ ಜೀವವಿಮುಖ ಧರ್ಮ

ಯಾಕಾದರೂ ಬೇಕು? ಈ ನೆಲೆಯಲ್ಲಿ ನೋಡಿದಾಗ ಇಲ್ಲಿ ಮಾನವೀಯ ದೃಷ್ಟಿಕೋನದಲ್ಲಿ ಬದುಕೇ ದೊಡ್ಡದಾಗಿ ಕಾಣುತ್ತದೆ. ಫಾತಿಮಾ ಧರ್ಮಕ್ಕೆ ಬೆಲೆ ನೀಡಿದ್ದರೆ ಅವಳ ಬದುಕು ದುಸ್ತರವಾಗಿತ್ತು. ಆದರೆ ಧರ್ಮವನ್ನು ನಿರಾಕರಿಸಿದ್ದರಿಂದ ಧಾರ್ಮಿಕ ಕಟ್ಟಾವಾದಿ ಅಥವಾ ಮೂಲಭೂತವಾದಿಗಳ ವಿರೋಧ ಬಿಟ್ಟರೆ ಮತ್ತೇನೂ ಆಗಲಿಲ್ಲ. ಇಲ್ಲಿ ಎಲ್ಲ ಮತ-ಧರ್ಮಗಳನ್ನೂ ಮೀರಿದ ತೇಜಸ್ವಿಯವರ ಮಾನವೀಯ ನೆಲೆ ಸಾದರಗೊಂಡಿರುವುದನ್ನು ಕಾಣಬಹುದಾಗಿದೆ.

ಸ್ತ್ರೀವಾದಿ ನೆಲೆಯಲ್ಲಿಯೂ ಫಾತಿಮಾಳ ವರ್ತನೆ ಚರ್ಚಾರ್ಹ. ಯಾವ ಗಂಡಸಿನ ಸಹಾಯವೂ ಇಲ್ಲದೆ ತನ್ನ ಮತ್ತು ತನ್ನ ಮಕ್ಕಳ ಜೀವನ ನಿರ್ವಹಣೆಗೆ ಧೈರ್ಯದಿಂದ ದುಡಿದು ಆತ್ಮಾಭಿಮಾನದಿಂದ ಬದುಕು ಸಾಗಿಸುತ್ತಿರುವ ಹೆಣ್ಣೊಬ್ಬಳ ಚಿತ್ರಣ ಸ್ತ್ರೀವಾದಿ ನೆಲೆಯ ಅಧ್ಯಯನಕ್ಕೆ ಅದ್ಭುತ ಆಕರವಾಗಬಲ್ಲದು. ಫಾತಿಮಾ ಗಂಡಸಿನ ಅಂಕೆಯನ್ನು ಮೀರಿ ಸ್ವತಂತ್ರವಾಗಿ ಬದುಕುತ್ತಿರುವ ಹೆಣ್ಣು ಮಾತ್ರ ಅಲ್ಲ, ಜಿಗುಟು ಕಟ್ಟುಪಾಡುಗಳ ಗೂಡಾಗಿರುವ ಧರ್ಮದ ವಿರುದ್ಧ ಸೆಟೆದು ನಿಂತ ಹೆಣ್ಣು. ಧಾರ್ಮಿಕ ಮೂಲಭೂತವಾದಿಗಳ ಕುತಂತ್ರಕ್ಕೆ ಎಷ್ಟೋ ಅಮಾಯಕ ಹೆಣ್ಣುಮಕ್ಕಳು ಬಲಿಯಾಗುತ್ತಿರುವ ಇಂದಿನ ಸಂದರ್ಭದಲ್ಲಿ ಅಂಥವರಿಗೆಲ್ಲ ಫಾತಿಮಾ ಸ್ಫೂರ್ತಿಯಾಗಬಲ್ಲಳು. ಧರ್ಮದ ಸಂಕೋಲೆಯನ್ನು ಕಿತ್ತೊಗೆದು ಧೈರ್ಯದಿಂದ ಜೀವಾಯಾಪನೆ ಮಾಡುವ ಬಜ್ಜಿ ಫಾತಿಮಾ ಕಾದಂಬರಿಯಲ್ಲಿ ಉನ್ನತವಾಗಿ ಗೋಚರಿಸುತ್ತಾಳೆ. ತೇಜಸ್ವಿಯವರ ಚಿಂತನೆ ಜೀವಕೇಂದ್ರಿತ ಹೇಗೋ ಹಾಗೆ ಬದುಕು ಕೇಂದ್ರಿತವೂ ಆಗಿತ್ತು ಎಂಬುದಕ್ಕೆ ಫಾತಿಮಾಳ ಪಾತ್ರ ಸ್ಪಷ್ಟ ಉತ್ತರ ನೀಡುತ್ತದೆ. ದರ್ಮ, ಜಾತಿ, ದೇವರು ಎಲ್ಲವನ್ನೂ ಮೀರಿದ ಮಾನವೀಯ ನೆಲೆ ತೇಜಸ್ವಿ ಚಿಂತನೆಯ ಕೇಂದ್ರಬಿಂದು.

೧೦

ತೇಜಸ್ವಿಗೆ ವಿಜ್ಞಾನದಲ್ಲಿ ಅಪಾರವಾದ ಆಸಕ್ತಿ ಇದ್ದಂತೆ ಆಳವಾದ ಜ್ಞಾನವೂ ಇತ್ತು. ಕಾದಂಬರಿಯಲ್ಲಿ ಪದೇ ಪದೇ ಬಳಕೆಯಾಗುವ ವೈಜ್ಞಾನಿಕ ಪದಗಳು ಇದನ್ನು ಪುಷ್ಟೀಕರಿಸುತ್ತವೆ. ಫುಟ್‌ವಾಲ್ವ್, ಅಮೆರ್ಚರ್, ಸಕ್ಷನ್‌ಪೈಪ್, ಸ್ಟಾರ್ಟರ್ ಸ್ವಿಚ್, ಆಕ್ಸಿಲರೇಟರ್ ಮುಂತಾದ ಹಲವು ತಾಂತ್ರಿಕ ಪದಗಳು ತಪ್ಪಿಲ್ಲದೆ ತಮ್ಮ ಒರಿಜಿನಲ್ ರೂಪಗಳಲ್ಲೇ ಕಾಣಿಸಿಕೊಳ್ಳುತ್ತವೆ. ಯಾವುದೇ ವೈಜ್ಞಾನಿಕ ಅಥವಾ ತಾಂತ್ರಿಕ ಪದಗಳಾದರೂ ಅವು ಸಾಮಾನ್ಯ ಜನರ ಬಾಯಲ್ಲಿ ತಮ್ಮ ಮೂಲ ರೂಪವನ್ನು ಕಳೆದುಕೊಳ್ಳುವುದೇ ಹೆಚ್ಚು. ಉದಾಹರಣೆಗೆ ಟೂಲ್ಸ್ ಎನ್ನುವುದು ಸ್ಟೂಲ್ ಆಗಿ, ಫ್ಯೂಸ್ ಎನ್ನುವುದು ಪೀಜು ಎಂದೂ, ಆಕ್ಸಿಲರೇಟರ್ ಎಕ್ಸ್‌ಲೀಟರ್ ಎಂದೂ ಮುಂತಾದ ಸಾವಿರಾರು ತಾಂತ್ರಿಕ ಪದಗಳು ಗ್ರಾಮೀಣ ಪರಿಸರದಲ್ಲಿ ಅವು ರೂಪಾಂತರಗೊಂಡು ಜನರಲ್ಲಿ ಬಳಕೆಯಾಗುತ್ತವೆ. ಆದರೆ ಮಾಯಾಲೋಕದಲ್ಲಿ ಮಾತ್ರ ಬರುವ ಎಲ್ಲ ತಾಂತ್ರಿಕ ಪದಗಳೂ ತಮ್ಮ ಮೂಲ ರೂಪದಲ್ಲೇ ಬಳಕೆಯಾಗಿವೆ. ಅಂದರೆ ಅವು ಎಲ್ಲೂ ರೂಪಾಂತರಗೊಂಡಿಲ್ಲ. ನಿರೂಪಕನೇನೋ ವಿದ್ಯಾವಂತ, ವಿಜ್ಞಾನದ ಬಗ್ಗೆ ಹೆಚ್ಚು ಜ್ಞಾನ ಉಳ್ಳವರು ಆದ್ದರಿಂದ ನಿರೂಪಣೆಯಲ್ಲಿ ತಾಂತ್ರಿಕ ಪದಗಳು ತಮ್ಮ ಮೂಲ ರೂಪಗಳನ್ನು ಪ್ರದರ್ಶಿಸಿವೆ. ಆದರೆ ಕರಾಟೆ ಮಂಜ, ಜಗ್ಗಣ್ಣ, ಇಕ್ಬಾಲ್‌ಸಾಬಿಯವರ ಮಾತುಗಳಲ್ಲಿ ಬರುವ ತಾಂತ್ರಿಕ ಪದಗಳೂ ಕೂಡ ಕರಾವಕ್ಕಾಗಿರುತ್ತವೆ ಎನ್ನುವುದನ್ನು ಗಮನಿಸಿದರೆ ವಿದ್ಯಾವಂತರಲ್ಲದ ಅವರ ಬಾಯಲ್ಲಿ ತಾಂತ್ರಿಕ ಪದಗಳು ಹೇಗೆ ಕರಾರುವಕ್ಕಾಗಿ ಮೂಡಲು ಸಾಧ್ಯ

ಎಂಬ ಅನುಮಾನ ಶುರುವಾಗುತ್ತದೆ. ಇದಕ್ಕೆ ಉತ್ತರ ಹುಡುಕ ಹೊರಟರೆ, ವಿಜ್ಞಾನದ ಮೇಲೆ ತೇಜಸ್ವಿಗಿದ್ದ ಪ್ರೀತಿ ಮತ್ತು ಜ್ಞಾನವೇ ಕಾರಣ ಎಂದು ತಿಳಿಯದೇ ಇರುವುದಿಲ್ಲ.

ವಿಜ್ಞಾನದ ಮೇಲೆ ಅಪಾರ ಆಸಕ್ತಿ ಹೊಂದಿದ್ದ ತೇಜಸ್ವಿ ಅದರ ಮಿತಿಗಳನ್ನೂ ಮತ್ತು ಅಪಾಯಗಳನ್ನೂ ಚೆನ್ನಾಗಿಯೇ ಗ್ರಹಿಸಿದ್ದರು. ಜೀವನದಲ್ಲಿ ವೈಜ್ಞಾನಿಕವಾಗಿರಬೇಕು, ಮೂಢನಂಬಿಕೆಗಳಿಗೆ ಬಲಿಯಾಗಬಾರದು ಎಂದೆಲ್ಲ ಹೇಳುವವರು ಒಂದುಕಡೆ, ದೇವರಲ್ಲಿ ಭಯ ಭಕ್ತಿ ಇರಬೇಕು, ದೇವರು ಇದ್ದ ಮೇಲೆ ದೆವ್ವ, ಪಿಶಾಚಿಗಳಿಗೂ ಅಸ್ತಿತ್ವವಿದೆ. ದೆವ್ವಗಳಿದ್ದ ಮೇಲೆ ಮಾಟ-ಮಂತ್ರಗಳೂ ಸುಳ್ಳಲ್ಲ ಎಂಬ ಚಿಂತನೆಗಳು ಮತ್ತೊಂದು ಕಡೆ. ವೈಜ್ಞಾನಿಕರು ಅಥವಾ ನಾಸ್ತಿಕರು ದೇವರು, ದೆವ್ವ, ಜ್ಯೋತಿಷ್ಯ ಮಾಟ-ಮಂತ್ರ ಎಲ್ಲವನ್ನೂ ಅಲ್ಲಗಳೆದು ತರ್ಕಕ್ಕೆ ನಿಲುಕದ ಎಲ್ಲವನ್ನು ನಿರಾಕರಿಸಿದರೆ, ಆಸ್ತಿಕರು ಅಥವಾ ದೈವಭಕ್ತರು ಮಾಟ-ಮಂತ್ರ, ದೇವ-ಭೂತ ಎಲ್ಲವನ್ನೂ ಸಂಪೂರ್ಣವಾಗಿ ನಂಬಿ ತರ್ಕವನ್ನೇ ವಿರೋಧಿಸುತ್ತಾರೆ. ವೈಜ್ಞಾನಿಕರಿಗೆ ತರ್ಕಕ್ಕೆ ನಿಲುಕದ ಪ್ರಕೃತಿಯ ವಿಸ್ಮಯಗಳು ಅರಿವಿಗೇ ಬರುವುದಿಲ್ಲ. ಇತ್ತ ತರ್ಕವನ್ನು ವಿರೋಧಿಸುವ ಎಲ್ಲಕ್ಕೂ ಅಗೋಚರ ಶಕ್ತಿಗಳೇ ಕಾರಣ ಎಂದು ನಂಬುವ ಆಸ್ತಿಕರಿಗೆ ವಾಸ್ತವತೆಯೇ ಗೋಚರಿಸುವುದಿಲ್ಲ. ಇಂಥ ಎರಡೂ ಅತಿರೇಕದ ದೋರಣೆಗಳು ಅಪಾಯಕರ ಮಾತ್ರವಲ್ಲ. ಅಮಾಯಕ ಜೀವಗಳ ಮೇಲೆ ತಮ್ಮ ಪ್ರಯೋಗ ನಡೆಸುವಂಥವು. ಈ ಎರಡೂ ಅತಿರೇಕಗಳ ನಡುವಿನ ಸಮದೃಷ್ಟಿಯೊಂದನ್ನು ಮಾಯಾಲೋಕ ಮಂಡಿಸುತ್ತದೆ. "ಅಂತ್ರ ಕಟ್ಟಿಕೊಂಡ ಮೇಲೆ ಆಸ್ಪತ್ರೆ ಔಷಧಿ ಯಾಕೋ? ಅಂತ್ರದಲ್ಲೇ ಖಾಯಿಲೆ ವಾಸಿಯಾಗ್ತದಲ್ಲ" ಎಂದು ನಿರೂಪಕ ಅಣ್ಣಪ್ಪಣ್ಣನನ್ನು ಕೇಳಿದ್ದಕ್ಕೆ "ನಮಗೆ ಬೇಕಾಗಿರೋದು ಖಾಯಿಲೆ ವಾಸಿಯಾಗೋದು ಅಲ್ವಾ ಸಾರ್! ಅಂತ್ರದಾಗೆ ಹೋಗೋಹಂಗಿದ್ರೆ ಅಂತ್ರದಾಗೆ ಹೋಗಲಿ, ಆಸ್ಪತ್ರೆ ಔಷಧಿಲೀ ಹೋಗೋ ಹಂಗಿದ್ರೆ ಅದರಾಗೇ ಹೋಗಲಿ. ನಮ್ಮ ಹುಷಾರಿಲಿ ನಾವಿರೋದು ಒಳ್ಳೆದಲ್ಲವಾ?" ಎಂದು ಅಣ್ಣಪ್ಪಣ್ಣ ಉತ್ತರಿಸುತ್ತಾನೆ. ಈ ಮಾತುಗಳೇ ವಿಜ್ಞಾನ ಮತ್ತು ಆಧ್ಯಾತ್ಮಿಕ ನಂಬುಗೆಯ ನಡುವಿನ ಸಮನ್ವಯ ದೃಷ್ಟಿಯನ್ನು ಮಂಡಿಸುತ್ತವೆ. ಅಂದರೆ ಇಲ್ಲಿ ಬದುಕಿಗೆ ಬೆಲೆ ನೀಡಲಾಗಿದೆ. ಯಾವುದೇ ಅತಿರೇಕಗಳಿಗೂ ಅಮೂಲ್ಯ ಜೀವವನ್ನು ಪ್ರಯೋಗಕ್ಕಿಡುವುದು ಸರಿಯಲ್ಲ ಎಂಬುದು ಇಲ್ಲಿನ ಧ್ವನಿ.

ವೈಜ್ಞಾನಿಕ ಚಿಂತನೆ ಎಂಬ ಅಪ್ಪಟ ಯಾಂತ್ರಿಕ ಮನೋಧರ್ಮಕ್ಕೆ ಬದ್ಧರಾಗಿ ಪ್ರಕೃತಿಯಲ್ಲಿ ನಡೆಯುವ ಅಗೋಚರ, ವಿಸ್ಮಯಗಳಿಗೆ ಬೆಲೆ ನೀಡದ ವ್ಯಕ್ತಿಗಳು ಎಲ್ಲದರ ಹಿಂದೆಯೂ ವೈಜ್ಞಾನಿಕ ಕಾರಣಗಳನ್ನು ಹುಡುಕುತ್ತಾರೆ. ಆದರೆ ಎಲ್ಲ ಘಟನೆಗಳೂ ವಿಜ್ಞಾನದ ತರ್ಕಕ್ಕೆ ನಿಲುಕಲು ಸಾಧ್ಯವಿಲ್ಲ. ಪ್ರಕೃತಿಯಲ್ಲಿ ನಡೆಯುವ ಅತಿಮಾನುಷ ಘಟನೆಗಳನ್ನು ವೈಜ್ಞಾನಿಕವಾಗಿ ನೋಡುವುದು ಸಾಧ್ಯವಿಲ್ಲ. ಜಗತ್ತಿನಲ್ಲಿ ನಡೆಯುವ ಎಲ್ಲ ಘಟನೆಗಳಿಗೂ ದೇವರೇ ಕಾರಣ, ನಮ್ಮ ಕಷ್ಟ ಕಾರ್ಪಣ್ಯಗಳಿಗೆ ಅಗೋಚರ ಶಕ್ತಿಗಳ ಕೈವಾಡವಿದ್ದೇ ಇರುತ್ತದೆ ಎಂದು ನಂಬುತ್ತಾ ಭೌತಿಕ ಘಟನೆಗಳಿಗೂ ಅಗೋಚರ ಕಾರಣಗಳನ್ನು ಹುಡುಕುತ್ತಾ ಅಂತ್ರ-ತಂತ್ರ ಜ್ಯೋತಿಷ್ಯದಲ್ಲೇ ಮುಳುಗಿರುವವರು ಮತ್ತೊಂದು ವರ್ಗ. ಇವರಿಗೆ ಕಣ್ಣಿಗೆ ಕಾಣುವಂಥ ಕಾರಣಗಳಿದ್ದರೂ ನಂಬಲು ಸಿದ್ಧರಿಲ್ಲ. ಇಂಥವರ ಪಾಲಿಗೆ ವಿಜ್ಞಾನ ಎಂದರೆ ಅಂಕಿ ಸಂಕೆಗಳ ಮೊತ್ತ ಅಷ್ಟೆ. ಜೈವಿಕ ಖಾಯಿಲೆಗಳಿಗೆ ಮಾಟ-ಮಂತ್ರದ ಚಿಕಿತ್ಸೆಗಳನ್ನು ನೀಡಿ ಜೀವವನ್ನೇ ಪ್ರಯೋಗಕ್ಕೆ ಒಡ್ಡುವವರು ಇವರು. ಹೀಗಾಗಿ ಈ ಎರಡೂ ಅತ್ಯಂತಿಕ ಧೋರಣೆಗಳಲ್ಲಿ

ಅಪಾಯ ಇದ್ದೇ ಇದೆ. ಈ ಎರಡರ ಸಮನ್ವಯ ದೃಷ್ಟಿಯೊಂದಿದ್ದು ಇದು ಬದುಕಿಗೆ ಬೆಲೆ ಕೊಡುತ್ತದೆ. ಈ ಧೋರಣೆ ಅಪಾಯದಲ್ಲಿರುವ ಅಮೂಲ್ಯ ಜೀವವೊಂದು ಬದುಕುವುದಾದರೆ ಅದು ಯಾವುದರಿಂದಲಾದರೂ ಸರಿ ಹೇಗಾದರೂ ಸರಿ ಬದುಕಲಿ ಎಂದು ಆಶಿಸುತ್ತದೆ. ಅಂದರೆ ನಾವು ವೈಜ್ಞಾನಿಕರು ಎಂದು ಹೇಳಿಕೊಂಡು ದೈವತ್ವವನ್ನೂ ಹಾಗೂ ಪ್ರಕೃತಿಯ ತರ್ಕಕ್ಕೆ ನಿಲುಕದ ವಿಸ್ಮಯಗಳನ್ನು ಅಲ್ಲಗಳೆಯದೆ ಅದರ ಹಿಂದಿನ ಯಾವುದೋ ಅದ್ಭುತ ಶಕ್ತಿಯನ್ನು ನಂಬುವುದು ಅನಿವಾರ್ಯ ಎಂದು ನನಗನಿಸುತ್ತದೆ. ಹಾಗೇ ನಾವು ಆಸ್ತಿಕರು ಅಥವಾ ದೈವಭಕ್ತರೆಂದು ಹೇಳಿಕೊಂಡು ಪ್ರತಿಯೊಂದಕ್ಕೂ ದೇವರನ್ನೇ ಹೊಣೆ ಮಾಡುತ್ತ ಅಗೋಚರ ಶಕ್ತಿಗಳ ಕೈವಾಡವನ್ನೇ ಶಂಕಿಸುತ್ತ ಕಣ್ಣುಮುಂದೆ ನಡೆಯುವ ಘಟನೆಗಳ ಭೌತಿಕ ಅಸ್ತಿತ್ವವನ್ನೇ ಅಲ್ಲಗಳೆಯುವುದು ಸರಿಯಲ್ಲ. ಇವರೆಡರ ಸಮನ್ವಯ ದೃಷ್ಟಿಯೇ ಇಂದಿನ ಬದುಕಿಗೆ ಅಗತ್ಯ ಎನ್ನುವ ಮಹತ್ವದ ತತ್ವವೊಂದನ್ನು ತೇಜಸ್ವಿ ಮಾಯಾಲೋಕದ ಮೂಲಕ ಮಂಡಿಸುತ್ತಾರೆ. ತೇಜಸ್ವಿಯವರ ಬದುಕು ಕೇಂದ್ರಿತ ಚಿಂತನೆ ಮತ್ತೆ ಮತ್ತೆ ಕಾದಂಬರಿಯಲ್ಲಿ ಪುನರಾವರ್ತನೆಯಾಗಿದೆ.

೧೧

"ತರಕಾರಿ ಅಂಗಡಿಯ ಜಲೀಲ್ ಸಾಬು ತನ್ನ ತರ್ಕಾರಿಗಳ ತಾಜಾತನ ಉಳಿಸಲು ನೀರು ಚಿಮುಕಿಸುತ್ತಾ ಇದ್ದ. ಎಷ್ಟು ನೀರು ಚಿಮುಕಿಸಿದರೂ ಆ ಗತಕಾಲದ ಪಳಯುಳಿಕೆಗಳಂಥ ತರಕಾರಿಗಳನ್ನು ಸಜೀವಗೊಳಿಸುವುದು ಕಷ್ಟಸಾಧ್ಯವಾಗಿತ್ತು. ಒಣಗಿ ಬೆಂಡಾಗಿ ನರಿಯ ಬಾಲದಂತೆ ಡೊಂಕು ಬಿದ್ದಿದ್ದ ಮೂಲಂಗಿ, ಕ್ಯಾರೆಟ್ಟು! ಸುಕ್ಕುಬಿದ್ದು ಮುದುಕನ ಕೆನ್ನೆಯಂತೆ ಕಾಣುತ್ತಿದ್ದ ಟಮಟೋ ನೋಲ್‌ಕೋಲುಗಳು! ರಬ್ಬರ್ ಬ್ಯಾಂಡುಗಳಂತೆ ಹಿಗ್ಗಿ ಕುಗ್ಗುವ ಸ್ಥಿತಿ ಸ್ಥಾಪಕ ಶಕ್ತಿ ಬಂದಿದ್ದ ಬೀನ್ಸು! ಇವುಗಳಿಗೆಲ್ಲ ಹೇಗೆ ಗಿರಾಕಿ ಹೊಂದಿಸಿ ಖಾಲಿ ಮಾಡುವುದೋ ಎಂದು ಚಿಂತಾಕ್ರಾಂತನಾಗಿದ್ದ. ಜಲೀಲ್, ಸ್ವಲ್ಪ ಚೆನ್ನಾಗಿರುವವನ್ನಾದರೂ ಮೇಲೆತ್ತಿ ಕಣ್ಣಿಗೆ ಕಾಣುವಂತೆ ಇಡೋಣ ಎಂದು ತರಕಾರಿ ರಾಶಿಯನ್ನು ಜಲೀಲ್ ಅಗೆದಗೆದು ತೆಗೆದು ಹಾಗೂ ಬತ್ತಿದ ತೊಗಲಿನ ಸುಕ್ಕಿದ ಮೋರೆಯ ಕುಗ್ಗಿದ ತರಕಾರಿಗಳೇ ಈಜಿಪ್ಟಿನ ಮಮ್ಮಿಗಳಂತೆ ಹೊರಬಿದ್ದು ಜಲೀಲನ ಹತಾಶೆ ಮಿಗಿಲಾಗುತಾ ಹೋಯ್ತು. ಸ್ಕೂಲಿಗೆ ರಜ ಇದ್ದುದರಿಂದ ಈಗಿನಿಂದಲೇ ಅಂಗಡಿ ವ್ಯಾಪಾರ ಕಲಿತುಕೊಳ್ಳಲಿ ಎಂದು ಮಗ ಹಮೀದನನ್ನು ಕರೆದುಕೊಂಡು ಬಂದಿದ್ದ" (ಮಾಯಾಲೋಕ-೧, ಪುಟ-೨೬, ೨೭, ಪ್ರ. ಪುಸ್ತಕ ಪ್ರಕಾಶನ, ಎರಡನೆ ಮುದ್ರಣ-೨೦೦೬, ಲೇ. ಕೆ.ಪಿ.ಪೂರ್ಣಚಂದ್ರ ತೇಜಸ್ವಿ)

ಜಲೀಲ್ ಸಾಬು ತನ್ನ ಬಾಡಿದ ತರಕಾರಿಗಳಿಗೆ ನೀರು ಚಿಮುಕಿಸಿ ಚೆನ್ನಾಗಿರುವುದನ್ನೂ ಮೇಲೆ ಜೋಡಿಸುತ್ತಾ ಗಿರಾಕಿಗಳನ್ನು ಆಕರ್ಷಿಸಲು ಪ್ರಯತ್ನಿಸುತ್ತಾನೆ. ಆ ಮೂಲಕ ತನ್ನ ವ್ಯಾಪಾರಿ ಚಾಣಾಕ್ಷತೆಯನ್ನು ಪ್ರದರ್ಶಿಸುತ್ತಾನೆ. ಗಿರಾಕಿ ಹೊಂದಿಸಿ ಹೇಗೆ ಖಾಲಿಮಾಡುವುದೋ ಎಂದು ಚಿಂತಿತನಾಗಿದ್ದ ಜಲೀಲನ ದೈನ್ಯ ಸ್ಥಿತಿ ಇಂದಿನ ಬಹುತೇಕ ಬೀದಿ ಬದಿ ವ್ಯಾಪಾರಿಗಳು ಬದುಕಲು ನಡೆಸುವ ಹೋರಾಟವನ್ನು ಪ್ರದಿನಿಧಿಸುತ್ತದೆ. ಆಯಕಟ್ಟಾದ ಜಾಗವೊಂದರಲ್ಲಿ ಅಂಗಡಿ ಮಾಡಿ ಅಂಗಡಿ ಅಡ್ವಾನ್ಸ್, ಬಾಡಿಗೆ ಇತ್ಯಾದಿ ನೀಡಲು ಹೆಚ್ಚಿನ ಬಂಡವಾಳವಿಲ್ಲದೆ ಇರುವ ಅಲ್ಪಬಂಡವಾಳದಲ್ಲೇ ಅಲ್ಪಸ್ವಲ್ಪ ತರಕಾರಿ ತಂದು ಬೀದಿ ಬದಿಯ ಉರಿ ಬಿಸಿಲಿನಲ್ಲೆ ದಿನಪೂರ್ತಿ ವ್ಯಾಪಾರ ಮಾಡಿದರೂ ಅಂದಿನ ಕೂಲಿ ದಕ್ಕುವುದು ಕಷ್ಟ. ಇನ್ನು ತರಕಾರಿ ಉಳಿದರಂತೂ ಅಂದಿನ

ಲಾಭಪಿರಲಿ ಅಸಲಿಗೂ ಖೋತಾ. ಓೀಗೆ ಗಿರಾಕಿಗಳ ಕೃಪಾಕಟಾಕ್ಷದಲ್ಲೇ ತಮ್ಮ ಜೀವನ ಜೋಕಾಲಿ ತೂಗುವ ಜಲೀಲನಂಥ ಸಾವಿರಾರು ಬೀದಿ ಬದಿ ವ್ಯಾಪಾರಿಗಳ ಜೀವನ ಸ್ಥಿತಿ ಅಯ್ಯೋ ಎನಿಸಿದರೂ ಅವರ ಜೀವನ ಹೋರಾಟ ನಮಗೆ ಮಾದರಿ ಎನಿಸಿದರೂ ಅಚ್ಚರಿಯಿಲ್ಲ. ಇಲ್ಲಿನ ಮತ್ತೊಂದು ದುರಂತ ಎಂದರೆ ಈ ವ್ಯಾಪಾರಿಗಳು ತಮ್ಮ ಮಕ್ಕಳನ್ನು ಅವರು ಪ್ರಾಥಮಿಕ ಶಾಲೆಯಲ್ಲಿ ಓದುತ್ತಿರುವಾಗಲೇ ತಮ್ಮ ವ್ಯಾಪಾರಕ್ಕೆ ಸೇರಿಸಿಕೊಂಡು ತರಭೇತಿ ನೀಡುತ್ತಾ ಪ್ರೌಢಶಾಲೆಯ ಮೆಟ್ಟಿಲು ಹತ್ತುವ ವೇಳೆಗಾಗಲೇ ಶಾಲೆ ಬಿಡಿಸಿ ಅವರನ್ನು ತಮ್ಮ ಬೀದಿ ಬದಿ ವ್ಯಾಪರೀ ಪರಂಪರೆಗೆ ಸೇರಿಸಿಕೊಂಡು ಬಿಡುತ್ತಾರೆ. ಹೆಚ್ಚಿಗೆ ಓದಿ ಉಜ್ವಲವಾಗಬಹುದಾಗಿದ್ದ ಹಮೀದನಂಥ ಮುಗ್ಧ ಮಕ್ಕಳು ತಂದೆಯ ಸಾಂಪ್ರದಾಯಿಕ ವ್ಯಾಪಾರವನ್ನು ಮುಂದುವರಿಸಿ ತಂದೆಯ ಅತಂತ್ರ ಬದುಕನ್ನು ತಾನೂ ಮುಂದುವರಿಸಬೇಕಾದ ಸ್ಥಿತಿ ತಲುಪುತ್ತಿದ್ದಾರೆ. ಇದು ಭಾರತದಲ್ಲಿ ಬಡತನದ ಒಂದು ಕರಾಳ ಮುಖ.

ಬಾಡಿ ಸುಕ್ಕು ಹಿಡಿದ ತರಕಾರಿಗಳ ದುಸ್ಥಿತಿ ನಮ್ಮ ಆಧುನಿಕ ಕೃಷಿ ವ್ಯವಸ್ಥೆಯನ್ನು ಅಣಕಿಸುತ್ತದೆ. ಹೆಚ್ಚಿನ ಲಾಭದ ಆಸೆಗೆ ಅತಿಯಾದ ರಸಗೊಬ್ಬರ ಬಳಸಿ ಬೆಳೆಯುವ ಇಂಥ ತರಕಾರಿಗಳು ಬಹುಬೇಗ ತಮ್ಮ ತಾಜಾತನ ಕಳೆದುಕೊಂಡು ಕಳೆಹೀನವಾಗುತ್ತವೆ. ಒಟ್ಟಿನಲ್ಲಿ ಜಲೀಲ್ ಸಾಬಿಯ ತರಕಾರಿ ಅಂಗಡಿಯ ಚಿತ್ರಣ ಭಾರತದ ಬಡತನಕ್ಕೆ ಅದೇ ಸಂದರ್ಭದಲ್ಲಿ ಕೃಷಿ ವ್ಯವಸ್ಥೆಯ ದುಸ್ಥಿಗೂ ಕನ್ನಡಿ ಹಿಡಯುತ್ತದೆ.



೧೨

ರಾಜಕಾರಣದ ಕರಾಳ ಮುಖವನ್ನು ಮಾಯಾಲೋಕ ಬಯಲುಮಾಡುತ್ತದೆ, ರಾಜಕೀಯ ಪಕ್ಷಗಳು ತಮ್ಮ ಹಿತಾಸಕ್ತಿಗಾಗಿ ಸಾರ್ವಜನಿಕರ ಕಷ್ಟ-ನಷ್ಟಗಳನ್ನೂ ಲೆಕ್ಕಿಸದೆ ಬಂದ್‌ಗೆ ಕರೆ ಕೊಡುತ್ತವೆ. ನಮಗೆ ಜನರ ಹಿತವೇ ಮುಖ್ಯ ಎಂದು ತಮ್ಮ ಎಲ್ಲ ರಾಜಕೀಯ ಭಾಷಣಗಳಲ್ಲೂ ಬೊಬ್ಬೆ ಹೊಡೆಯುವ ರಾಜಕೀಯ ಪುಡಾರಿಗಳಿಗೆ ಜನರ ನೆಮ್ಮದಿ ಬೇಕಾಗಿಲ್ಲ. ಸಣ್ಣಪುಟ್ಟ ಕಾರಣಗಳಿಗೆಲ್ಲ ಬಂದ್‌ಗೆ ಕರೆ ಕೊಡುವುದು ಅವುಗಳ ಜಾಯಮಾನವಾಗಿಬಿಟ್ಟಿದೆ. ವಿಚಿತ್ರ ಅಂದ್ರೆ ಎಷ್ಟೋ ವೇಳೆ ಜನತೆಗಾದ ಅನ್ಯಾಯವನ್ನು ಸರಿಪಡಿಸಬೇಕೆಂದು ಬಂದ್‌ಗೆ ಕರೆ ಕೊಟ್ಟಾಗಲೂ ಬಂದ್‌ನಲ್ಲಿ ಸಾರ್ವಜನಿಕರು ಭಾಗವಹಿಸುವುದು ವಿರಳ. ಇಲ್ಲಿ ಅದು ತಪ್ಪೋ ಸರಿ ಎನ್ನುವುದಕ್ಕಿಂತ ಬಂದ್ ಎನ್ನುವ ಅಸ್ತ್ರವನ್ನು ರಾಜಕೀಯ ಪಕ್ಷಗಳು ಹೇಗೆ ತಮ್ಮ ರಾಜಕೀಯ ದಾಳವನ್ನಾಗಿ ಬಳಸಿಕೊಳ್ಳುತ್ತವೆ ಎನ್ನುವುದದನ್ನು ಪ್ರತಿಷ್ಠಾಪಿಸುದು ಇಲ್ಲಿನ ತುರ್ತು. ರಾಜಕೀಯ ಪಕ್ಷಗಳು ಮುಷ್ಕರಕ್ಕೆ ಕರೆ ಕೊಡುವುದು 'ತಮ್ಮ ತೆವಲಿಗೆ' ಅಷ್ಟೆ.

ರಾಜಕೀಯ ಪಕ್ಷ ಅಥವಾ ರಾಜಕಾರಣಿಗಳು ತಮ್ಮ ಜನಬೆಂಬಲಕ್ಕೆ ಹೂಡುವ ತಂತ್ರ ಅಂದ್ರೆ ಸಾರ್ವಜನಿಕರು ಸಹಜವಾಗಿ ಹೆಚ್ಚಿನ ಸಂಖ್ಯೆಯಲ್ಲಿ ಸೇರುವ ಜಾಗಗಳಲ್ಲಿ ತಮ್ಮ ರಾಜಕೀಯ ಭಾಷಣಗಳನ್ನು ಹಮ್ಮಿಕೊಳ್ಳವುದು. ಸಂತೆ, ಜಾತ್ರೆ ಮುಂತಾದ ಕಡೆಗಳಲ್ಲಿ ಸಹಜವಾಗಿ ಸಾವಿರಾರು ಜನ ಸೇರುತ್ತಾರೆ ಇಂಥ ಕಡೆಗಳಲ್ಲಿ ತಮ್ಮ ಪಕ್ಷದ ಪ್ರಚಾರ ಭಾಷಣವನ್ನೋ ಚುನಾವಣಾ ಭಾಷಣವನ್ನೋ ಆರಂಭಿಸಿ ಮಾಧ್ಯಮಗಳಿಗೆ ಅದೇ ಜನರನ್ನು ತೋರಿಸಿ, ತಮ್ಮ ಕಾರ್ಯಕ್ರಮಕ್ಕೆ ಸೇರಿದ್ದ ಭಾರೀ ಜನಸ್ತೋಮ ಎಂದು ಬಿಂಬಿಸಿ ಇದು ನಮ್ಮ ಪಕ್ಷಕ್ಕೆ ಸಾಮಾನ್ಯ ಜನ ನೀಡುತ್ತಿರುವ ಬೆಂಬಲ ಎಂಬಂತೆ

ಪ್ರತಿಬಿಂಬಿಸುತ್ತವೆ. ಹೀಗೆ ನಾನಾ ವಿಧಗಳಲ್ಲಿ ಮುಗ್ಧ ಜನತೆಯನ್ನು ವಂಚಿಸುವ ಕಾರ್ಯ ಅವ್ಯಾಹತವಾಗಿ ನಡೆಯುತ್ತಿದೆ ಎಂಬ ಧ್ವನಿ ಕಾದಂಬರಿಯಲ್ಲಿ ವ್ಯಕ್ತವಾಗಿರುವುದನ್ನು ಕಾಣಬಹುದು.

ರಾಜಕೀಯ ಪಕ್ಷಗಳು ತಾವು ಕರೆ ನೀಡುವ ಬಂದ್‌ಗಳನ್ನು ಯಶಸ್ವಿಗೊಳಿಸಲು ನಡೆಸುವ ಹುನ್ನಾರಗಳನ್ನು ನೋಡಿ "ಯಾವ ಪಕ್ಷವೇ ಆಗಿರಲಿ ಬಂದ್‌ಗೆ ಕರೆ ಕೊಟ್ಟ ಕೂಡಲೇ ಇವರಿಗೆ ಮೂರು ಸಾವಿರ ಕೊಟ್ಟರೆ ಸಾಕು ಇವರು ಊರೆಲ್ಲಾ ಸುತ್ತಾಡಿ ಎಲ್ಲಾ ಅಂಗಡಿಗಳ ಬಾಗಿಲು ಮುಚ್ಚಿಸುತ್ತಿದ್ದರು" (ಮಾಯಾಲೋಕ-೧, ಪುಟ-೨೧೫, ಪ್ರ. ಪುಸ್ತಕ ಪ್ರಕಾಶನ, ಎರಡನೆ ಮುದ್ರಣ-೨೦೦೬, ಲೇ. ಕೆ.ಪಿ.ಪೂರ್ಣಚಂದ್ರ ತೇಜಸ್ವಿ)

ಬಾಡಿಗೆ ಗೂಂಡಾಗಳನ್ನು ಛೂ ಬಿಟ್ಟು ಬಲವಂತವಾಗಿ ಅಂಗಡಿ ಮುಂಗಟ್ಟುಗಳನ್ನು ಮುಚ್ಚಿಸಿ ಬಂದ್‌ಗೆ ಬೆಂಬಲ ಸೂಚಿಸುವಂತೆ ಮಾಡುತ್ತವೆ. ಆ ರೌಡಿಗಳಾದರೂ ತಮಗೆ ಹೇಗಿದ್ದರೂ ರಾಜಕೀಯ ಬೆಂಬಲವಿದೆ ಎಂಬ ಮತ್ತಿನಲ್ಲಿ "ಅಂಗಡಿಗೆ ನುಗ್ಗಿ ಒಂದಷ್ಟು ಸಾಮಾನು ದೋಚುವುದು, ಕಲ್ಲು ಹೊಡೆದು ಅಲ್ಲಿರುವ ಗಾಜು ಒಡೆಯುವುದು" (ಪುಟ-೨೧೫) ಮಾಡುತ್ತಾರೆ. ಇವರ ಭಯಕ್ಕೆ ಅಸಹಾಯಕ ಅಂಗಡಿ ವ್ಯಾಪಾರಿಗಳು "ಕೊನೇಪಕ್ಷ ಅವರು ಸ್ಥಳದಲ್ಲಿ ಇರುವವರೆಗಾದರೂ ಬಾಗಿಲು ಮುಚ್ಚಿಬಿಡುತ್ತಿದ್ದರು." (ಪುಟ-೨೧೫) ದುರಂತ ಅಂದ್ರೆ "ಪೋಲೀಸರೂ ಇವರ ಮೇಲೆ ಕ್ರಮ ತೆಗೆದುಕೊಳ್ಳಲು ಹಿಂಜರಿಯುತ್ತಾರೆ" (ಪುಟ-೨೧೫) ಗೂಂಡಾಗಳ ಸಹಾಯದಿಂದ ಬಲವಂತವಾಗಿ ಅಂಗಡಿಗಳನ್ನು ಮುಚ್ಚಿಸುವ "ಬಂದ್ ಘೋಷಿಸಿದ ಪಕ್ಷದ ಕಾರ್ಯಕರ್ತರು, ಪದಾಧಿಕಾರಿಗಳು ಬ್ಯಾನರ್ರು, ಪ್ಲಕಾರ್ಡು ಇತ್ಯಾದಿಗಳನ್ನು ಹಿಡಿದುಕೊಂಡು" (ಪುಟ-೨೧೫) ಮೆರವಣಿಗೆ ಹೊರಡುತ್ತಾರೆ. "ಪರ್ತಕರ್ತರು ಫೋಟೊ ತೆಗೆದು ಬಂದ್ ಪೂರ್ಣ ಯಶಸ್ವಿಯಾಯ್ತು ಎಂದು ಸುದ್ದಿ ಪ್ರಕಟಿಸುತ್ತಿದ್ದರು" (ಪುಟ-೨೧೫) ಇದು ರಾಜಕೀಯ ಪಕ್ಷಗಳು ತಮ್ಮ ತೆವಲಿಗೆ ಬಂದ್‌ಗೆ ಕರೆ ಕೊಟ್ಟು ಅದನ್ನು ಯಶಸ್ವಿ ಮಾಡುವ ಪರಿ. ರಾಜಕಾರಣಿಗಳ ಭೂಗತರಾಜಕಾರಣ ಮತ್ತು ಮಾಧ್ಯಮಗಳ ಪಕ್ಕಾ ಕಮರ್ಷಿಯಲ್ ಧೋರಣೆಗಳು ಹೇಗೆ ಸಮಾಜವನ್ನು ದಾರಿ ತಪ್ಪಿಸುತ್ತಿವೆ ಎನ್ನುವ ವಿಷಯವನ್ನು ಗಂಭೀರವಾಗಿ ಚಿಂತಿಸಬೇಕಿದೆ.

ರಾಜಕಾರಣಿ ಅಥವಾ ರಾಜಕೀಯ ಪಕ್ಷಗಳು ರೌಡಿಗಳ ಸೃಷ್ಟಿಕರ್ತರು. "....ಸಂತೆ ಮಾಳಕ್ಕೆ ಅಂಗಡಿ ಹಾಕಲು ಬರುವವರ ಬಳಿ ದುಡ್ಡು ಕೀಳುವುದು, ಬೆಳಗಿನ ಬಸ್ಸಿಗಾಗಿ ಕಾಯುತ್ತಾ ಬಸ್‌ಸ್ಟಾಂಡಿನಲ್ಲಿ ನಿದ್ದೆ ಮಾಡುವವರ ಮೇಲೆ ಹಲ್ಲೆ ಮಾಡುವುದು, ರಾತ್ರೋರಾತ್ರಿ ಬರುವ ನೈಟ್‌ಬಸ್‌ಗೆ ಕಾಯುವ ಪ್ರಯಾಣಿಕರನ್ನು ಸುಲಿಯಲು ಪ್ರಯತ್ನಿಸುವುದು ಇಷ್ಟರಲ್ಲೇ ತೃಪ್ತಿಪಟ್ಟುಕೊಂಡಿದ್ದ ಏಳೆಂಟು ಜನ ಪೋಕರಿಗಳಿಗೆ ಒಬ್ಬ ದಾದಾ ಹುಟ್ಟಿಕೊಂಡ ! ಸಾರಾಯಿ ಮಳಿಗೆ ಇಟ್ಟುಕೊಂಡಿದ್ದ ಚಿಕ್ಕವೀರು ಈ ರೌಡಿಗಳಿಗೆ ಉಚಿತ ಸಾರಾಯಿ ಒದಗಿಸಿ ಅವರನ್ನು ನಿಯಂತ್ರಿಸಲು ಆರಂಭಿಸಿದ. ಇವರನ್ನೆ ಉಪಯೋಗಿಸಿ ಮುನಿಸಿಪಾಲಿಟಿ ಎಲೆಕ್ಷನ್ನಿನಲ್ಲೂ ಗೆದ್ದಿದ್ದೇ ತಡ ಅವನ ಚೇಲಾಗಳೆಲ್ಲಾ ಬಿಳೀ ಜುಬ್ಬ ಪೈಜಾಮ ಧರಿಸಿ ರಾಜಕಾರಣಿಗಳಾದರು. ಚುನಾವಣೆ ಬಂದಾಗ ರಾತ್ರೋರಾತ್ರಿ ಹಣ, ಸೀರೆ, ಪಂಚೆ ಹಂಚುವ ಭೂಗತ ರಾಜಕಾರಣಕ್ಕೆ ಇಂಥವರ ಅಗತ್ಯ ಇದ್ದಿದ್ದರಿಂದ

ಎಲ್ಲ ರಾಜಕೀಯ ಪಕ್ಷಗಳೂ ತಾತ್ಕಾಲಿಕವಾಗಿಯಾದರೂ ಇಂಥವರ ಸಹಾಯಕ್ಕೆ ಕೈ ಚಾಚುತ್ತಿದ್ದು, ಪೋಲೀಸರೂ ಇವರ ಮೇಲೆ ಕ್ರಮ ಕೈಗೊಳ್ಳಲು ಇಂಜರಿದರು" (ಮಾಯಾಲೋಕ-೧, ಪುಟ-೨೧೪, ೨೧೫, ಪ್ರ. ಪುಸ್ತಕ ಪ್ರಕಾಶನ, ಎರಡನೆ ಮುದ್ರಣ-೨೦೦೬, ಲೇ. ಕೆ.ಪಿ.ಪೂರ್ಣಚಂದ್ರ ತೇಜಸ್ವಿ)

ಸಣ್ಣಪುಟ್ಟ ಕುಕೃತ್ಯಗಳಲ್ಲಿ ತೊಡಗಿರುವವರನ್ನು ಹಣದ ರುಚಿ ತೋರಿಸಿ ಅವರನ್ನು ತಮ್ಮ ಹೀನ ಕೃತ್ಯಗಳಿಗೆ ಬಳಸಿಕೊಳ್ಳುವ ಮೂಲಕ ದಾರಿ ತಪ್ಪುತ್ತಿರುವ ಯುವಪೀಳಿಗೆಯನ್ನು ರೌಡಿಗಳಾಗಿ ರೂಪಿಸುವುದು ರಾಜಕಾರಣಿಗಳೇ. ಆಮೇಲೆ ಈ 'ಪೋಕರಿಗಳಿಗೆ ಒಬ್ಬ ದಾದಾ ಹುಟ್ಟಿಕೊಂಡು' ಅವನೇ ಮುಂದೆ ರಾಜಕಾರಣಿಯಾಗುತ್ತಾನೆ. ರಾಜಕಾರಣ ರೌಡಿಗಳನ್ನು ಮಾತ್ರ ಸೃಷ್ಟಿಸುತ್ತಿಲ್ಲ ಜೊತೆಗೆ ರೌಡಿಗಳೇ ರಾಜಕಾರಣಕ್ಕೆ ಬರಲು ಪೂಷಣೆ ನೀಡುತ್ತಿದೆ.

ರೌಡಿಗಳಿಂದ ಅನೇಕ ಸಮಾಜ ಘಾತುಕ ಕೆಲಸಗಳನ್ನೂ ಮಾಡಿಸುವುದು ಬಹುತೇಕ ರಾಜಕಾರಣಿಗಳೇ ಅಥವಾ ಅದೂ ಕೂಡ ಯಾವುದೋ ಒಂದರ ಒಡೆತನದ ರಾಜಕಾರಣವೇ. ಹೀಗೆ ನೋಡಿದರೆ ದೇಶದ ಯಾವುದೇ ರೌಡಿಗೂ ಅವರು ಮಾಡುವ ಸಮಾಜ ಘಾತುಕ ಅಥವಾ ಸಮೂಹ ನಾಶಕ ಕೆಲಸಗಳಿಗೆ ಒಂದಲ್ಲ ಒಂದು ರೀತಿಯ ರಾಜಕೀಯ ಪೋಷಣೆ ಇದ್ದೇ ಇರುತ್ತದೆ ಎಂಬ ಸತ್ಯ ಅರಿವಿಗೆ ಬರುತ್ತದೆ. ಮೊದ ಮೊದಲು ರಾಜಕಾರಣದಿಂದಲೇ ಭೂಗತ ಜಗತ್ತು ಸೃಷ್ಟಿಯಾಗಿದ್ದರೂ ಇಂದು 'ಭೂಗತ ರಾಜಕಾರಣ'ವೇ ತಾಂಡವಾಡುತ್ತಿರುವುದನ್ನು ಮಾಯಾಲೋಕ ಸಾಕ್ಷೀಕರಿಸುತ್ತದೆ. ರೌಡಿಗಳು ಪಕ್ಷಾತೀತರು 'ರೂಲಿಂಗ್ ಪಾರ್ಟಿಯೋರಿಗೆ ವಿರೋಧಪಕ್ಷದೋರಿಗೆ ಎಲ್ಲರಿಗೂ ಸಹಾಯ' ಮಾಡುತ್ತಾರೆ. ಈ ಹಿನ್ನೆಲೆಯಲ್ಲಿ ಯೋಚಿಸಿದರೆ ಇಂದಿನ ಸಂದರ್ಭದಲ್ಲಿ ಬೃಹದಾಕಾರವಾಗಿ ಬೆಳೆದಿರುವ ರೌಡಿಸಂ ಮತ್ತು ದಿನನಿತ್ಯ ನಡೆಯುತ್ತಿರುವ ಭಯಂಕರ ಕೊಲೆಗಳಂಥ ಸಮಾಜ ಕಂಟಕಗಳ ಹಿಂದೆ ರಾಜಕೀಯ 'ಕೈವಾಡ'ವೇ ಪ್ರಧಾನವಾಗಿದೆ ಎಂಬುದು ಹೊಳೆಯದೆ ಇರುವುದಿಲ್ಲ. ಅಷ್ಟೇ ಏಕೆ ಇಂದು ವಿಶ್ವದೆಲ್ಲೆಡೆ ಆತಂಕವನ್ನು ಸೃಷ್ಟಿಸಿರುವ ಭಯೋತ್ಪಾದನೆಯೂ ಕೂಡ ರಾಜಕಾರಣದ ಪೋಷಕನೆ ಎನಿಸುತ್ತದೆ. ಆದರೆ ಇದು ರಾಷ್ಟ್ರ ರಾಷ್ಟ್ರಗಳ ಅಂದರೆ ಅಂತರಾಷ್ಟ್ರೀಯ ರಾಜಕಾರಣದ ಪ್ರತಿಫಲ. ಇಂಥ ವಿಶ್ವ ವ್ಯಾಪಿ ಮತ್ತು ಸ್ಥಳೀಯ ಸಾಮಾಜಿಕ ಸಮಸ್ಯೆಗಳ ಚರ್ಚೆಗಳಿಗೆ ಮಾಯಾಲೋಕದಲ್ಲಿ ಪರಿಕರಗಳು ದೊರಕುವುದರಿಂದಲೇ ತೇಜಸ್ವಿಯವರದು 'ಮಾಯಾಲೋಕ'.

ಮಾಧ್ಯಮಗಳ ಕಮರ್ಷಿಯಲ್ ಧೋರಣೆಯನ್ನು, ಸಮಾಜವನ್ನು ದಾರಿ ತಪ್ಪಿಸುವಂಥ ಅವುಗಳ ಸುದ್ದಿ ಪ್ರಕಟಣೆಯನ್ನು ಮತ್ತು ರಾಜಕಾರಣದ ಕರಾಳ ಮುಖವನ್ನು ತೀವ್ರ ಚರ್ಚೆಗೊಳಪಡಿಸಲು ಆಧಾರಗಳನ್ನೊದಗಿಸುವ ಮಾಯಾಲೋಕ ಸಾಮಾಜಿಕ 'ಸೇವೆ'ಯಲ್ಲಿ ತೊಡಗಿರುವ ಕೆಲವು ಪ್ರಧಾನ ಸಂಘಟನೆಗಳನ್ನೂ ನಿಕಷಕ್ಕೆ ಒಡ್ಡುತ್ತದೆ.

ಕರ್ನಾಟಕದ ರೈತರ ಏಕಮಾತ್ರ ಸಂಘಟನೆ ರೈತಸಂಘ ಈಗ ಹಿಡಿದಿರುವ ಹಾದಿಯ ಬಗ್ಗೆ ಎಲ್ಲರಿಗೂ ಪರಿಚಯವಿದೆ. ಪ್ರೊ. ನಂಜುಂಡಸ್ವಾಮಿ ರೈತ ಸಂಘವನ್ನು ಕರ್ನಾಟಕದ ಒಂದು ಪ್ರಧಾನ ಸಂಘಟನೆಯಾಗಿ ರೂಪಿಸಿದ್ದರು. ರೈತರ ದನಿಯಾಗಿ ಬೆಳೆಸಿದ್ದರು. ರೈತರ ಪರವಾಗಿ ಹೋರಾಡುವ

ಏಕಾಮಾತ್ರ ಸಂಘಟನೆಯಾಗಿದ್ದ ರೈತಸಂಘ ನಂಜುಂಡಸ್ವಾಮಿಯವರ ನಿಧನಾ ನಂತರ ಭಾಗವಾಗಿ ಈಗ ತನ್ನ ಶಕ್ತಿಕಳೆದುಕೊಂಡಿದೆ. ರೈತನಾಯಕರು ಸಂಘಟನೆಯ ಶಕ್ತಿಯನ್ನು ಬಲಪಡಿಸುವ ಬದಲು ತಮ್ಮ ಬಣವನ್ನು ಬಲಪಡಿಸಿಕೊಳ್ಳಲು ಹೆಣಗುತ್ತಿದ್ದಾರೆ. ಇದು ರಾಜ್ಯ ಮಟ್ಟದಲ್ಲಿ ನಾಯಕತ್ವದಲ್ಲಿ ಉಂಟಾದ ಒಡಕಾದರೆ ಸಂಘಟನೆಯ ಅಂತರಂಗದಲ್ಲಿ ಬೇರೆಯದೇ ಆದ ಬದಲಾವಣೆಗಳುಂಟಾಗಿವೆ. ಕಾರ್ಯಕರ್ತರ ಮಟ್ಟದಲ್ಲಿ ಉಂಟಾಗಿರುವ ಈ ಬದಲಾವಣೆಗಳು ಗಂಭೀರ ಸಂಘಟನೆಯನ್ನು ಹಾಸ್ಯಾಸ್ಪದವಾಗಿಸುತ್ತಿವೆ.

ರೈತಸಂಘ ರೈತರ ಸಮಸ್ಯೆಗಳಿಗೆ ಸ್ಪಂದಿಸೋ ಸಂಘಟನೆಯಾಗಿ ಉಳಿದಿಲ್ಲ. ಬದಲಿಗೆ ಕೆಲಸವಿಲ್ಲದ ಮೈಗಳ್ಳರ, ಸರ್ಕಾರಿ ಅಧಿಕಾರಿಗಳನ್ನು ಹೆದರಿಸಿಕೊಂಡು ಹಣ ಕೀಳುವ ಪೋಕರಿಗಳ ಸಂಘಟನೆಯಾಗಿದೆ ಎಂಬುದನ್ನು ಕಾದಂಬರಿಯಲ್ಲಿ ಬರುವ ವಿವರಗಳು ಸ್ಪಷ್ಟಪಡಿಸುತ್ತವೆ. ಈಗ ಯಾವ ಹಳ್ಳಿಯಲ್ಲಿ ನೋಡಿದರೂ ರೈತಸಂಘದ ಬೋರ್ಡ್ ಯಾಕಂದ್ರೆ "ಕುತ್ತಿಗೆಗೆ ಹಸುರು ಟವಲ್ಲು ಸುತ್ತಿಕೊಂಡು ಊರು ಮುಂದೆ ಹಸಿರು ಬೋರ್ಡು ಹಾಕಿದ್ರೆ ಆಫೀಸರುಗಳು ಒಳಗೆ ಕಾಲಿಡಕ್ಕೆ ಹೆದರ್‍ತಾರೆ" (ಪುಟ-೧೯೭) "ಸ್ವಭಾವತಃ ಉಗ್ರಗಾಮಿಗಳಾದ ರೈತಸಂಘದ ಯುವಕರು"
(ಪುಟ-೨೨೭)
ಮಾತೆತ್ತಿದರೆ ಚಳುವಳಿ, ಪ್ರತಿಭಟನೆಗೆ ಮುಂದಾಗುತ್ತಾರೆ. ಹೀಗಾಗಿ 'ರೈತಸಂಘದವರು ಅಲ್ಲಿದ್ದಾರೆ ಅಂದ್ರೆ ಅದು ಕ್ರಿಮಿನಲ್ ಕೇಸಿಗೆ ದಾರಿಯಾಗುವುದರಲ್ಲಿ ಅನುಮಾನವೇ ಇಲ್ಲ' (ಪುಟ-೨೦೭) ಎಂಬ ಭಾವನೆ ವ್ಯಾಪಕವಾಗುತ್ತಿದೆ.

ರೈತಸಂಘ ಸಮರ್ಥ ಯುವ ಸಂಘಟನೆಯಾಗಲಿ ಎಂದು ಅಧಿಕ ಸಂಖ್ಯೆಯಲ್ಲಿ ಯುವಕರನ್ನು ಸಂಘಕ್ಕೆ ಸೇರಿಸಿಕೊಂಡಿರುವುದರಿಂದ ಈಗ ರೈತಸಂಘ ಎಂದರೆ ತರಲೆ ಯುವಕರ ಅಡ್ಡೆಯಾಗಿ ಹೋಗಿದೆ. ಸರ್ಕಾರಿ ಮೇಲಧಿಕಾರಿಗಳು 'ಆ ತರ್ಲೆ ಹುಡುಗರ ತಂಟೆಗೆ ಹೋಗಬೇಡ್ರಿ.....ಅವರ ತಂಟೆಗೆ ಹೋದ್ರೆ ಬೀದಿಯಲ್ಲಿ ಹೋಗೋ ಮಾರಿ ಮನೆಯೊಳಗೆ ಕರೆದಂಗೆ ಆಗುತ್ತೆ...." ಎಂದು ತಮ್ಮ ಕೆಳ ಅಧಿಕಾರಿಳಿಗೆ ಕಿವಿಮಾತು ಹೇಳುತ್ತಿದ್ದಾರೆ. ಹೆಂಗಸರನ್ನು ಪ್ರತಿಭಟನೆಯ ಮುಂದಿಟ್ಟುಕೊಂಡು ತಮ್ಮ ಸ್ವಾರ್ಥ ಸಾಧನೆ ಮಾಡಿಕೊಳ್ಳುವ ನಾಯಕರಿಗೇನೂ ರೈತಸಂಘದಲ್ಲಿ ಕೊರತೆಯಿಲ್ಲ.

ರೈತಸಂಘದವರು ರಸ್ತೆರೋಖೋ ಚಳುವಳಿ ನಡೆಸುವ ವೇಳೆ ಅಧ್ಯಕ್ಷ ಬಸವೇಗೌಡರು ದೊಂಬಿ ಎಬ್ಬಿಸಬೇಡಿ, ಗಲಭೆ ಮಾಡಬೇಡಿ ಎಂದು ಹೇಳಿದರು. ಆದರೂ ಬಸ್ಸುಗಳನ್ನು ತಡೆದು ಬಸ್ಸಿನ ಡ್ರೈವರ್ "ಬ್ಯಾಡ ಕಣ್ರೋ ಅಂತ ಎಷ್ಟು ಹೇಳಿದರೂ ಕೇಳದೆ ಬೇವರಿಸಿ ಹುಡುಗ್ರು ಚಕ್ರದ ಗಾಳಿ ತೆಗೆದುಬಿಟ್ಟರು" (ಪುಟ-೨೩೧) ಇಷ್ಟೇ ಸಾಲದು ಎಂಬಂತೆ ಕಬ್ಬಿಣದ ಅದಿರು ಸಾಗಿಸುವ ಲಾರಿಗಳನ್ನು ತಡೆದು ಹಣ ವಸೂಲಿ ಮಾಡುತ್ತಿದ್ದರು. ಒಟ್ಟಿನಲ್ಲಿ ಈಗ ರೈತಸಂಘ ಅಂದ್ರೆ ಹಣವಸೂಲಿ ಮಾಡ್ತಾ ಎಲ್ಲರನ್ನು ಹೆದರಿಸಿಕೊಂಡು ತಿರುಗುವ ಪೋಕರಿಗಳ ಸಂಘ ಆಗ್ಬಿಟ್ಟಿದೆ. ಇವರ ಜೊತೆ ನಾಯಕತ್ವಕ್ಕೆ ಕಿತ್ತಾಟ. ಇವರಿಗೆಲ್ಲ ರೈತರ ಹಿತ ಬೇಕಾಗಿಲ್ಲ. ತಮ್ಮ ಸ್ವಪ್ರತಿಷ್ಠೆ, ಸ್ಥಾನಮಾನ ಮುಖ್ಯವಾಗಿದೆ.

ಆದ್ದರಿಂದಲೇ ಸಾಲದ ವಿಷ ವರ್ತುಲಕ್ಕೆ ಸಿಲುಕಿ ಆತ್ಮಹತ್ಯೆಗೆ ಶರಣಾಗುತ್ತಿರುವ ಅಮಾಯಕ ರೈತರ ಜೀವಗಳು ಬಲಿಯಾಗುವುದು ಇನ್ನೂ ತಪ್ಪಿಲ್ಲ

ದಲಿತ ಸಂಘರ್ಷ ಸಮಿತಿಯ ಬಗೆಗೂ ಕಾದಂಬರಿಯಲ್ಲಿ ನೇತ್ಯಾತ್ಮಕ ಧೋರಣೆಗಳು ವ್ಯಕ್ತವಾಗಿರುವುದನ್ನು ಕಾಣಬಹುದು. ಚಳುವಳಿಗಳು ನಡೆಯುವುದು ಕೇವಲ ಪ್ರಚಾರಕ್ಕೇ ಹೊರತು ಯಾರ ಉದ್ಧಾರಕ್ಕೂ ಅಲ್ಲ ಎನ್ನುವ ಭಾವನೆಯನ್ನು ಇಲ್ಲಿನ ಹಲವು ನಿದರ್ಶನಗಳು ಪುಷ್ಟೀಕರಿಸುತ್ತವೆ. ದಲಿತ ಸಂಘಟನೆಗಳ ಮುಖಂಡರು ಚಳುವಳಿಯ ಹೆಸರಿನಲ್ಲಿ ಅಮಾಯಕರನ್ನು ಮುಂದಿಟ್ಟುಕೊಂಡು ಬೇಕಾದ ಕೆಲಸಗಳನ್ನು ಮಾಡುತ್ತಿರುವುದನ್ನು ನೋಡಿದರೆ ಅಂಬೇಡ್ಕರ್ ಸಂಪಾದಿಸಿದ 'ದಲಿತತ್ವ' 'ಬೀದಿಗಿಳಿದು' ಹಾಳಾಗುತ್ತಿದೆ ಎನಿಸುತ್ತದೆ.

ದಲಿತರ, ಅಲ್ಪ ಸಂಖ್ಯಾತರ ಮತ್ತು ಶೋಷಿತರ ದನಿಯಾಗಬೇಕಿದ್ದ ದಲಿತ ಸಂಘರ್ಷ ಸಮಿತಿ ಮುಖಂಡರ ಅಧಿಕಾರ ಲಾಲಸೆಗೆ ಒಳಗಾಗಿ ಹತ್ತಾರು ಹೋಳುಗಳಾಗಿ ಒಡೆದು ಹೋಗಿದೆ. ಪ್ರತಿಭಟನೆಯ ಹೆಸರಿನಲ್ಲಿ ಸರ್ಕಾರಿ ಅದರಲ್ಲೂ ಸಮಾಜ ಕಲ್ಯಾಣ ಇಲಾಖೆಯ ಅಧಿಕಾರಿಗಳನ್ನು ಹೆದರಿಸಿ ಲಂಚ ಕೀಳುವುದು ಮತ್ತು ರಾಜಕಾರಣಿಗಳ ಮುಂದೆ ತಮ್ಮ 'ಜನ ಬೆಂಬಲ'ವನ್ನು ತೋರಿಸಿ ಎಂಜಲು ಕಾಸಿಗೆ ಕೈಚಾಚುವುದು ಎಲ್ಲರಿಗೂ ತಿಳಿದ ವಿಚಾರವಾಗಿದೆ. ಮೇಲ್ಜಾತಿಯವರು ಜಗಳಕ್ಕೆ ಬಂದರೆ ವಿನಾಕಾರಣ ಅವರ ಮೇಲೆ ಅಟ್ರಾಸಿಟಿ ಕೇಸು ಹಾಕಿಸುವುದು ಸಾಮಾನ್ಯವಾಗಿಬಿಟ್ಟಿದೆ. ದಲಿತರನ್ನು ಮೇಲ್ಜಾತಿಯ ಜನ ಹೀಗಳೆದು ಅವರ ಆತ್ಮಾಭಿಮಾನಕ್ಕೆ ಕುದುಂಟಾಗಬಾರದು ಎಂದು ರೂಪಿಸಿದ ಕಾನೂನು ಅವರಿಂದಲೇ ದುರುಪಯೋಗಗೊಳ್ಳುತ್ತಿದೆ. ದಲಿತರಿಗೆ ಜಾತಿನಿಂದನೆ ಕಾನೂನು ಒಂದು ಅಸ್ತ್ರವಾಗಿಬಿಟ್ಟಿದೆ.

ಕಾರ್ಮಿಕ ಸಂಘಟನೆಗಳಾದರೂ ಯಾವ ರೀತಿ ಕಾರ್ಮಿಕರ ಹಕ್ಕುಗಳನ್ನು ಕಾಪಾಡುತ್ತಿವೆ. ಅದಕ್ಕೂ ಮೊದಲು ಒಬ್ಬ ಕಾರ್ಮಿಕ ಮುಖಂಡನೆನಿಸಿಕೊಂಡವನು ಮುಖಂಡನಾಗುವ ಅನಿವಾರ್ಯತೆ ಎಂಥದು ಎಂಬುದನ್ನು ತಿಳಿಯುವುದು ಒಳಿತು. ಮಾಯಾಲೋಕದಲ್ಲಿ ಪ್ರಕಾಶನಿಗೆ ಪತ್ರಿಕೋದ್ಯಮದ ಪ್ರೊಫೆಷನಲಿಸಮ್ ಹೇಳಿಕೊಡುವ ಡೆಲ್ಫಿ ತಾನು ಕಾರ್ಮಿಕ ಮುಖಂಡನಾಗಿದ್ದು ಅವನೇ ಹೇಳುವ ಹಾಗೆ 'ಹೊಟ್ಟೆಪಾಡಿಗಾಗಿ ಏನಾದರೂ ಮಾಡಿಕೊಳ್ಳಬೇಕೆಂದು ಕಂಪನಿ ತೋಟಗಳಲ್ಲಿ ಕಾರ್ಮಿಕ ಸಂಘಟನೆ ಕಟ್ಟ ತೊಡಗಿದ' ಮೇಲೆ.

ಚಿಕ್ಕಮಗಳೂರಿನ ಎಸ್ಟೇಟ್ ಸಂಸ್ಕೃತಿಯಲ್ಲಿ ಕಾಫಿ ತೋಟಗಳಲ್ಲಿ ದುಡಿಯುವ ಸಾವಿರಾರು ಕಾರ್ಮಿಕರಿರುತ್ತಾರೆ. ಇವರನ್ನು ಒಗ್ಗೂಡಿಸಿ ಅವರಿಗೆಲ್ಲ ತಾನು ಮುಖಂಡನಾಗುವ ಮೂಲಕ ಡೆಲ್ಫಿ ತನ್ನ ಬದುಕಿಗೊಂದು 'ಆಧಾರ' ಮಾಡಿಕೊಂಡ. ಇದನ್ನು ಗಮನಿಸಿದರೆ ಯಾವುದೇ ನಾಯಕ ಹುಟ್ಟಬೇಕಾದರೆ ಅವನ ಹೊಟ್ಟೆಪಾಡಿನ ತುರ್ತು ಇದ್ದೇ ಇರುತ್ತದೆ ಎಂಬ ಧ್ವನಿ ಇಲಿರುವುದು ಗಮನಕ್ಕೆ ಬರುತ್ತದೆ. ಈ ತುರ್ತಿನಲ್ಲಿ ಅವನು ತನ್ನ ಬದುಕಿಗೊಂದು ಮಾರ್ಗ ಕಂಡುಕೊಳ್ಳುವ ಹಂತದಲ್ಲಿ ಸಂಘಟನೆಯನ್ನು ಕಟ್ಟುವ ಅಥವಾ ಅದಕ್ಕೆ ನಾಯಕನಾಗುವ ಸಾಧ್ಯತೆಯಿದೆ. ಡೆಲ್ಫಿ ತನ್ನ

ಕಾರ್ಮಿಕ ಸಂಘಟನೆ ಕಾರ್ಯ ನಿರ್ವಹಿಸುವುದರ ಬಗ್ಗೆ ಹೇಳುವ ಮಾತುಗಳನ್ನು ಕೇಳಿದರೆ ಇದು ಇನ್ನಷ್ಟು ಸ್ಪಷ್ಟವಾಗುತ್ತದೆ. "ಈಗ ಕಾರ್ಮಿಕ ಸಂಘಟನೆ ಇರೋದು ಕಾರ್ಮಿಕರ ಸಮಸ್ಯೆಗಳನ್ನ ಪರಿಹಾರ ಮಾಡೋದಕ್ಕೆ ಅಲ್ವೆನಯ್ಯಾ? .....ಅದ್ರೆ ಎಲ್ಲಾ ಪರಿಹಾರವಾಗಿಬಿಟ್ಟರೆ ಸಂಘ ಬರಖಾಸ್ತು ಮಾಡಬೇಕಾಗುತ್ತೆ ಅಲ್ಲವ? ಅದಕ್ಕೇ ಪರಿಹಾರ ಮಾಡ್ತಾನೇ ಇನ್ನಷ್ಟು ಸಮಸ್ಯೆ ಹುಟ್ಟುಹಾಕುವ ಹಾಗೆ ಮಾಡ್ತೀವಿ ಆ ಕಂಪನಿ ತೋಟಗಳಲ್ಲಿ ಎರಡು ಕಂಬಳಿ ಕೊಡ್ತಿದಾರಂತೆ ನಿಮ್ಮ ತೋಟದಲ್ಲಿ ಯಾಕೆ ಒಂದೇ ಕೊಡ್ತಿದಾರೆ ಅಂತ ಇನ್ನೊಂದು ಕಡೆ ಹೇಳ್ತೀವಿ. ಅಲ್ಲಿ ಬಿಕ್ಕಟ್ಟು ಶುರುವಾಗುತ್ತೆ. ಮತ್ತೆ ನನ್ನನ್ನು ಕರೆಸುತ್ತಾರೆ. ಹೀಗೇ ನಮ್ಮ ಹೊಟ್ಟೆಪಾಡು ನಡಕೊಂಡು ಹೋಗುತ್ತೆ." (ಮಾಯಾಲೋಕ-೧, ಪುಟ-೧೮೧, ಪ್ರ. ಪುಸ್ತಕ ಪ್ರಕಾಶನ, ಎರಡನೆ ಮುದ್ರಣ-೨೦೦೬, ಲೇ. ಕೆ.ಪಿ.ಪೂರ್ಣಚಂದ್ರ ತೇಜಸ್ವಿ) ಈ ಮಾತುಗಳನ್ನು ಹೇಳಿಸೋ ತೇಜಸ್ವಿಗೆ ಕಾರ್ಮಿಕ ಸಂಘಟನೆಗಳು ಕೆಲಸ ಮಾಡೊ ರೀತಿ, ಅದರ ನಾಯಕರ ಧೋರಣೆಗಳು ಸ್ಪಷ್ಟವಾಗೇ ತಿಳಿದಿತ್ತು. ಆದ್ದರಿಂದಲೇ ಅವರು ಯಾವೊಂದು ಸಂಘಟನೆಯ ಜೊತೆಗೂ ಗಾಢವಾಗಿ ಗುರ್ತಿಸಿಕೊಳ್ಳಲೇ ಇಲ್ಲ.

ಇದು ನಾಯಕ ರೂಪುಗೊಳ್ಳುವ ಪರಿಯಾದರೆ ಸಂಘಟನೆಯೊಂದು ಜನ್ಮ ತಳೆಯುವುದು ಇದಕ್ಕಿಂತ ಭಿನ್ನವಾಗೇನೂ ಇಲ್ಲ. ಹೊಟ್ಟೆಪಾಡಿಗೊಂದು ಮಾರ್ಗ ಕಂಡುಕೊಳ್ಳುವ ಹಂತದಲ್ಲಿ ಡೆಲ್ಫಿ ಕಾರ್ಮಿಕ ನಾಯಕನಾಗಿ ರೂಪುಗೊಂಡ ಅಷ್ಟೇ ಅಲ್ಲ ಆ ನಾಯಕತ್ವವನ್ನೇ ತನ್ನ ಬಂಡವಾಳವಾಗಿಸಿಕೊಂಡ. ಇವನು ಮುಖಂಡನಾಗಿ ಮತ್ತಷ್ಟು ಬಲಗೊಂಡರೆ ಮುಂದೆ ಮಾಡುವ ಕೆಲಸವೇನು? ಹೇಗಿದ್ದರೂ ನನಗೆ ಕಾರ್ಮಿಕ ಬೆಂಬಲವಿದೆ ಎಂದು ತನ್ನದೇ ಒಂದು ಕಾರ್ಮಿಕ ಸಂಘವನ್ನೇ ಸ್ಥಾಪಿಸಿಬಿಡುತ್ತಾನೆ. ಇದೂ ಕೂಡ ಅವನ ಹೊಟ್ಟೆಪಾಡಿನ ಮಾರ್ಗದ ಮುಂದುವರಿಕೆಯಲ್ಲದೆ ಮತ್ತೇನೂ ಆಗಿರಲು ಸಾಧ್ಯವಿಲ್ಲ. ಇದನ್ನು ಹಿನ್ನೆಲೆಯಾಗಿರಿಸಿಕೊಂಡು ಇಂದಿನ ಸಂದರ್ಭದಲ್ಲಿ ಜನಸೇವೆ, ಸಮಾಜಸೇವೆ ಎಂದು ಹೇಳಿಕೊಂಡು ದಿನಕ್ಕೊಂದು ಸಂಘ, ಸಂಘಟನೆಗಳು ತಲೆಯೆತ್ತುವುದನ್ನು ನೋಡಿದರೆ ಅವುಗಳ ಹಿಂದಿನ ಉದ್ದೇಶ ಸ್ಪಷ್ಟವಾಗುತ್ತದೆ.

೧೩

ಜಾಗತೀಕರಣದ ಕುರಿತ ತಟಸ್ಥ ನಿಲುವಿದ್ದರೂ ಕೂಡ ಅದರ ಅಪಾಯಗಳ ಅರಿವು ತೇಜಸ್ವಿಗಿತ್ತು. ಅದು ದೇಸೀ ಸಂಸ್ಕೃತಿ, ದೇಸೀ ಮಾರುಕಟ್ಟೆ ದೇಸಿ ತಂತ್ರಜ್ಞಾನ-ಹೀಗೆ ಎಲ್ಲವನ್ನೂ ಒಸಕಿಹಾಕಿ ಅದರ ಮೇಲೆ ಬೆಳೆಯಬಲ್ಲ ಶಕ್ತಿಯಿದೆ ಎಂಬ ಬಗ್ಗೆ ಅವರಿಗೆ ಶಂಕೆಯಿರಲಿಲ್ಲ. ಅದರ ದೈತ್ಯಾಕಾರದ ಮುಂದೆ ದೇಸಿ ಎಂಬುದು ಸಣಕಲ ಎಂಬುದು ಗೊತ್ತಿತ್ತು. ಜಾಗತೀಕರಣವನ್ನು ಈಗಾಗಲೇ ದೇಶಕ್ಕೆ ಆಹ್ವಾನಿಸಿದ್ದಾಗಿದೆ. ಅದರ ಅಪಾಯಗಳನ್ನು ಎದುರಿಸುವುದು ಅನಿವಾರ್ಯವಾಗಿದೆ. ಜಾಗತೀಕರಣದಿಂದಲೇ ದೇಶದ ಉದ್ಧಾರ ಸಾಧ್ಯ; ಜಾಗತಿಕರಣದಿಂದ ದೇಶ ಆಧುನಿಕವಾಗುತ್ತೆ ಎಂದೆಲ್ಲ ಜಾಗತೀಕರಣದ ಪರವಾಗಿ ವಾದಿಸುವವರಿಗೆ ಅದರ ಕರಾಳ ಮುಖದ ಪರಿಚಯವಿಲ್ಲ. ಆದರೆ ತೇಜಸ್ವಿ ಸಾಹಿತ್ಯ ತನ್ನದೇ ರೀತಿಯಲ್ಲಿ ಅತ್ಯಂತ ಸರಳವಾಗಿ ಹಾಗೂ ಸಹಜವಾಗಿ ಜಾಗತೀಕರಣದ ಅಪಾಯಗಳನ್ನು ಸ್ಫುಟವಾಗಿ ಮಂಡಿಸುತ್ತೆ. ಈ ಮಂಡನೆ ಮಾಯಾಲೋಕದಲ್ಲೂ ಮುಂದುವರಿದಿದೆ. "......ಆದರೆ ಬಜಾಜ್ ಕಂಪನಿಯವರು ಡೀಸೆಲ್ ಗಾಡಿಗಳನ್ನು ಮಾರುಕಟ್ಟೆಗೆ ಬಿಟ್ಟರು ಅದು ಬರತ್ಲೂ

ನಮ್ಮ ವ್ಯಾಪಾರ ನೆಲಕಚ್ಚಿ ಬಿಡ್ತು. ಅವರು ನಮಗಿಂತ ಅರ್ಧ ರೇಟಿನಲ್ಲಿ ಬಾಡಿಗೆ ಓಡಿಸ್ತಾರೆ ಸಾರ್. ನನ್ನದು ಪೆಟ್ರೋಲ್ ಗಾಡಿ ಅವರ ರೇಟಿನಲ್ಲಿ ನಮಗೆ ಓಡಿಸೋದಕ್ಕೆ ಆಗಲ್ಲ ಸಾರ್! ಹಂಗೂ ಒಂದಷ್ಟು ದಿನ ಪೆಟ್ರೋಲಿಗೆ ಸೀಮೆಎಣ್ಣೆ ಮಿಶ್ರ ಮಾಡಿಕೊಂಡು ರಿಕ್ಷಾ ಓಡಿಸಿ ಅಲ್ಲಿಂದಲ್ಲಿಗೆ ಮಾಡ್ತಾ ನಿಭಾಯಿಸಿದೆ." (ಮಾಯಾಲೋಕ-೧, ಪುಟ-೮,೬೩, ಪ್ರ. ಪುಸ್ತಕ ಪ್ರಕಾಶನ, ಎರಡನೆ ಮುದ್ರಣ-೨೦೦೬, ಲೇ. ಕೆ.ಪಿ.ಪೂರ್ಣಚಂದ್ರ ತೇಜಸ್ವಿ)

ಇಲ್ಲಿ ಡೀಸೆಲ್ ಗಾಡಿಯ ಎದುರು ಪೆಟ್ರೋಲ್ ರಿಕ್ಷಾ ಸೆಣಸಲಾರದೆ ಸೋಲುವ ಚಿತ್ರಣವಿದೆ. ಇದು ಅಷ್ಟಕ್ಕೆ ಸೀಮಿತವಲ್ಲ. ಇದನ್ನು ವ್ಯಾಪಕವಾಗಿ ನೋಡಿದಾಗ ಅದರ ಆಳ ನಮಗೆ ದಕ್ಕುತ್ತದೆ. ಜಾಗತೀಕರಣ ಎಂಬ ರಾಕ್ಷಸ ದೇಸೀಯವಾದ ಎಲ್ಲ ಅಂಶಗಳನ್ನು ನಾಶಗೊಳಿಸುವ ಪರಿ ಇದು.

ತೇಜಸ್ವಿ ಜಾಗತೀಕರಣದ ಅಪಾಯಗಳನ್ನಷ್ಟೇ ಹೇಳಲಿಲ್ಲ. ಬದಲಿಗೆ ಅದಕ್ಕೆ ದೇಸಿ ನೆಲೆಯಿಂದಲೇ ಹೊಮ್ಮಬಹುದಾದ ವಿರೋಧದ ನೆಲೆಗಳನ್ನೂ ಶೋಧಿಸಿ ತೋರಿಸಿದರು. ಈ ವಿರೋಧಗಳು ಜಾಗತೀಕರಣವನ್ನು ಸಮರ್ಥವಾಗಿ ಎದುರಿಸಲು ಸಾಧ್ಯವಾಗದಿದ್ದರೂ ಅದಕ್ಕೆ ಸೂಕ್ತ ಪೈಪೋಟಿಯನ್ನಂತೂ ನೀಡಬಲ್ಲವು. ಇಲ್ಲಿ ಕರಾಟೆಮಂಜ ಪೆಟ್ರೋಲ್‌ಗೆ ಸೀಮೆ ಎಣ್ಣೆ ಬೆರೆಸುವ ತಂತ್ರ ಜಾಗತೀಕರಣಕ್ಕೆ ದೇಸಿ ನೆಲೆಯಿಂದ ಒಡ್ಡಿದ ವಿರೋಧ ಎಂದೇ ಭಾವಿಸುತ್ತೇನೆ. ಇಂಥ ವಿರೋಧಗಳು ಎಲ್ಲ ಕ್ಷೇತ್ರಗಳಲ್ಲೂ ಹೊರಹೊಮ್ಮಿದರೆ 'ದೇಸಿ'ಯನ್ನು ಜಾಗತೀಕರಣದ ಸಮರ್ಥ ವಿರೋಧಿ ಶಕ್ತಿಯಾಗಿ ರೂಪಿಸಬಹುದು.

ಇನ್ನೊಂದು ಅಂಥದೇ ಘಟನೆಯಿದೆ "......ಇದು ಜನಗಳು ಹಿಂದಿನಿಂದ ಅನುಸರಿಸಿಕೊಂಡು ಬಂದ ಪದ್ಧತಿಯಾದರೂ ಸಹ್ಯಾದ್ರಿ ಕಾಡುಗಳಿಗೆ ಯುಪೆಟೋರಿಯಂ ಕಳೆ ಕಾಲಿಟ್ಟ ಮೇಲೆ ಕಾಳ್ಗಿಚ್ಚಿನಿಂದಾಗುವ ಅನಾಹುತದ ಪ್ರಮಾಣ ಹೆಚ್ಚುತ್ತಾ ಬಂದಿದ್ದು ಯಾರ ಗಮನಕ್ಕೂ ಬಂದಿರಲಿಲ್ಲ. ಯುಪೆಟೋರಿಯಂ ಕಳೆ ಮರಕ್ಕೆ ಸುತ್ತಿಕೊಂಡು ಬಳ್ಳಿಯಂತೆ ಎತ್ತರಕ್ಕೆ ಬೆಳೆಯುತ್ತದೆ. ಹಿಂದೆಲ್ಲಾ ಕಾಡಿಗೆ ಬೆಂಕಿ ಬಿದ್ದಾಗ ಕೇವಲ ನೆಲಮಟ್ಟದಲ್ಲಿದ್ದ ಹುಲ್ಲು ಸುಡುತ್ತಿದ್ದರಿಂದ ದೊಡ್ಡ ದೊಡ್ಡ ಎತ್ತರದ ಮರಗಳಿಗೆ ಹೆಚ್ಚು ಘಾಸಿಯಾಗುತ್ತಿರಲಿಲ್ಲ. ಆದರೆ ಈಗ ಮರ ತಬ್ಬಿ ಹಿಡಿದಿರುವ ಯುಪೆಟೋರಿಯಂ ಜ್ವಾಲೆಕಾರುತ್ತಾ ಉರಿದರೆ ದೊಡ್ಡ ಮರಗಳ ತೊಗಟೆ ಬಹಳ ಎತ್ತರದವರೆಗೂ ಸುಟ್ಟು ಸಾಯುತ್ತಿದ್ದವು. ಕಾಡು ಪ್ರಾಣಿಗಳಿಗಂತೂ ಕಾಳ್ಗಿಚ್ಚು ಬಿದ್ದರೆ ಯುಪೆಟೋರಿಯಂ ಯಮಪಾಶವೇ ಸರಿ. ಯುಪೆಟೋರಿಯಂ ಬೆಳೆದಿದ್ದ ಕಾಡಿಗೆ ಬೆಂಕಿ ಬಿದ್ದರೆ ಕಾಳ್ಗಿಚ್ಚು ಅಕ್ಷರಶಃ ನಾಗರಹಾವಿನಂತೆ ಭುಸುಗುಡುತ್ತಾ ವೇಗವಾಗಿ ವ್ಯಾಪಿಸುವುದನ್ನು ನೋಡಿದ್ದೇನೆ. ಯುಪೆಟೋರಿಯಂ ಜಿಗ್ಗಿನಲ್ಲಿ ತೊಡಗಿಕೊಂಡ ಜಿಂಕೆ, ಕಾಡುಕೋಣ, ಇತ್ಯಾದಿ, ಮಿಂಚಿನ ಓಟಗಾರರೂ ಸಹ ಬೆಂಕಿಗಿಂತ ವೇಗವಾಗಿ ಓಡಿ ತಪ್ಪಿಸಿಕೊಳ್ಳಲಾರದೆ ಸುಟ್ಟು ಸತ್ತಿರುವ ಬೇಕಾದಷ್ಟು ಘಟನೆಗಳಿವೆ" (ಮಾಯಾಲೋಕ-೧, ಪುಟ-೬೨,೬೩, ಪ್ರ. ಪುಸ್ತಕ ಪ್ರಕಾಶನ, ಎರಡನೆ ಮುದ್ರಣ-೨೦೦೬, ಲೇ. ಕೆ.ಪಿ.ಪೂರ್ಣಚಂದ್ರ ತೇಜಸ್ವಿ)

ಇಲ್ಲಿ ಸಹ್ಯಾದ್ರಿ ಕಾಡುಗಳಿಗೆ ಬೆಂಕಿ ಬಿದ್ದಾಗ ಮುಂಚೆ ಅದು ಹಬ್ಬುತ್ತಿದ್ದ ಬಗೆಗೂ ಯುಪೆಟೋರಿಯಂ ಎಂಬ ಹೊಸ 'ಕಳೆ' ಕಾಡಿಗೆ ಕಾಲಿಟ್ಟ ಮೇಲೆ ಕಾಳ್ಗಿಚ್ಚು ಹಬ್ಬುವ ಬಗೆಗೂ ಅಜಗಜಾಂತರ ವ್ಯಾತ್ಯಾಸವಿರುವುದನ್ನು ತೋರಿಸಲಾಗಿದೆ. ಅಂದರೆ ಯುಪೆಟೋರಿಯಂ ಬರುವುದಕ್ಕೂ ಮುಂಚೆ ಕಾಳ್ಗಿಚ್ಚಿನಿಂದ ಉಂಟಾಗುವ ಹಾನಿಯ ಪ್ರಮಾಣ ಯುಪೆಟೋರಿಯಂ ಆಗಮನದ ಬಳಿಕ ಹಲವುಪಟ್ಟು ಹೆಚ್ಚಿರುವುದನ್ನು ಗಮನಿಸಬಹುದು. ಇದು ಇಡೀ ಕಾಡನ್ನೇ ಅಪೋಶನ ತೆಗೆದುಕೊಳ್ಳುವಂತೆ ಹಬ್ಬುವ ಸೂಚನೆಯಿದೆ. ಜಾಗತೀಕರಣವೆಂಬ ಕಾಳ್ಗಿಚ್ಚನ್ನು ಪೂರ್ಣ ಪ್ರಮಾಣದಲ್ಲಿ ಆಹ್ವಾನಿಸಿದರೆ ದೇಸಿ ಸಂಸ್ಕೃತಿಯೆಂಬ ಕಾಡು ಇದೇ ತೆರನಾಗಿ ನಾಶದ ಹಾದಿ ಹಿಡಿಯುವ ಸಂಭವವಿದೆ. ಈಗಾಗಲೇ ಯುಪೆಟೋರಿಯಂ ರೂಪದಲ್ಲಿ ದೇಶಕ್ಕೆ ಕಾಲಿಟ್ಟಿರುವ ಜಾಗತೀಕರಣದ ಕಾಳ್ಗಿಚ್ಚು ಧಗಧಗಿಸಿ ಉರಿಯಲು ಬೇಕಾದ ವಾತಾವರಣವನ್ನು ನಿರ್ಮಿಸಿಕೊಳ್ಳುತ್ತಿದೆ ಅಥವಾ ನಿರ್ಮಿಸಿಕೊಂಡಾಗಿದೆ. ಅದನ್ನು ಈಗಲೇ ನಾಶಪಡಿಸದಿದ್ದರೆ ಮಲೆನಾಡಿನ ಕಾಡಿಗಾದ ಸ್ಥಿತಿಯೇ ದೇಸಿಯತೆಗೂ ಒದಗುವುದನ್ನು ತಪ್ಪಿಸಲು ಸಾಧ್ಯವಿಲ್ಲ.

೧೪

ಕಾದಂಬರಿಯಲ್ಲಿ ಅಬ್ಬೂಸ್‌ಬೇರಿ ನೀಡುವ ಮೀನಿನ ಗೊಬ್ಬರ ಬಹುದೊಡ್ಡ ರೂಪಕವಾಗಿ ಬಂದಿರುವುದನ್ನು ಕಾಣಬಹುದು. ತನ್ನ ಮೆಣಸಿನ ಮಡಿಗಳಿಗೆ ಹಾಕಲೆಂದು ತಂದು ಮನೆಯಲ್ಲಿಟ್ಟಿದ್ದ ಮೀನಿನ ಗೊಬ್ಬರ ಬೀದಿಯಲ್ಲಿ ಹೋಗುವ ಜನಕ್ಕೂ ದುರ್ವಾಸನೆ ಬೀರುತ್ತದೆ. ಇನ್ನು ಅದೇ ಮನೆಯಲ್ಲಿ ವಾಸಿಸುವವರ ಪಾಡೇನು? ಅಣ್ಣಪ್ಪಣ್ಣನಿಗೂ ಅವನ ಹೆಂಡತಿಗೂ ಇದೇ ಕಾರಣಕ್ಕೆ ಸಾಕಷ್ಟು ಜಗಳ ಶುರುವಾಗಿ ಅದು ನ್ಯಾಯ ತೀರ್ಮಾನಕ್ಕೆ ನಿರೂಪಕರವರೆಗೂ ಬರುತ್ತದೆ. ಅಂತೂ ಕೊನೆಗೆ ಅಣ್ಣಪ್ಪಣ್ಣ ಆ ಮೀನಿನ ಗೊಬ್ಬರವನ್ನು ಮೆಣಸಿನ ಗಿಡಗಳಿಗೆ ಹಾಕುತ್ತಾನೆ. ಆದರೆ ಅಲ್ಲಿ ಆ ಹೊಲಸಿನ ವಾಸನೆ ಹಿಡಿದ ಹಂದಿಗಳು ಗೊಬ್ಬರವನ್ನೆ ಮೀನು ಎಂದು ಭಾವಿಸಿದವೋ ಏನೋ ಮೆಣಸಿನ ಗಿಡಗಳನ್ನೆಲ್ಲಾ ಗೂಟಿ ಹಾಕುತ್ತವೆ. ಬಿದ್ದ ಮೆಣಸಿನ ಗಿಡಗಳನ್ನೆಲ್ಲಾ ಮತ್ತೆ ಎತ್ತಿ ನಿಲ್ಲಿಸಿದ್ದರಿಂದ ಅವು ಚೇತರಿಸಿಕೊಂಡು ಮೈದುಂಬಿ ಕಾಯಿ ಬಿಡುತ್ತವೆ- ಹೀಗೆ ಇಲ್ಲಿ ಮೀನಿನ ಗೊಬ್ಬರ ಹಲವು ಘಟನೆಗಳಿಗೆ ಕಾರಣವಾಗುತ್ತದೆ. ಜನರಲ್ಲಿ ಅಸಹ್ಯದ ಭಾವನೆ ಹುಟ್ಟಿಸುತ್ತದೆ. ಅದರ ದುರ್ನಾತದಿಂದಾಗಿಯೇ ಮೀನಿನ ಗೊಬ್ಬರದ ಮೇಲೆ ಎಲ್ಲರಿಗೂ ದಟ್ಟ ತಿರಸ್ಕಾರ. ಇದು ಮೀನಿನ ಗೊಬ್ಬರದ ಭೌತಿಕ ಸ್ಥಿತಿ. ಇದೇ ಮೀನಿನ ಗೊಬ್ಬರವನ್ನು ತಾತ್ವಿಕವಾಗಿ ಯೋಚಿಸುವುದಾದರೆ ಮೀನಿನ ಗೊಬ್ಬರ ಸಾವಯವ ಗೊಬ್ಬರದ ಪ್ರತೀಕವಾಗಿ, ನಮ್ಮ ದೇಸಿ ಜ್ಞಾನ ಸಂಪತ್ತಿನ ರೂಪಕವಾಗಿ ಬಳಕೆಯಾಗಿರುವಂತೆ ಕಾಣುತ್ತದೆ. ಮೀನಿನ ಗೊಬ್ಬರದ ದುರ್ವಾಸನೆಗೆ ಎಲ್ಲರೂ ಅಸಹ್ಯಪಟ್ಟುಕೊಂಡು ಅದರ ಬಗ್ಗೆ ನಿರ್ಲಕ್ಷ್ಯ ವಹಿಸುತ್ತಾರೆ. ಆದರೆ ಅದೇ ಗೊಬ್ಬರದಿಂದ ಅಣ್ಣಪ್ಪಣ್ಣನ ಮೆಣಸಿನ ಗಿಡದಲ್ಲಿ ಹಿಂದೆಂದೂ ಕಂಡಿರದಂಥ ಅದ್ಭುತ ಫಸಲು ಬಂದಿದ್ದು ಎಲ್ಲರಿಗೂ ಅಚ್ಚರಿ ಮೂಡಿಸುತ್ತೆ. ಭಾರತದಂಥ ವಿಭಿನ್ನ ಸಂಸ್ಕೃತಿಯುಳ್ಳ ದೇಶದಲ್ಲಿ ದೇಸಿ ಜ್ಞಾನಸಂಪತ್ತು ಅಪಾರವಾಗಿದ್ದರೂ ಎಲ್ಲರ ನಿರ್ಲಕ್ಷಕ್ಕೊಳಗಾಗಿ ಅವನತಿಯ ಹಂತದಲ್ಲಿದೆ. ಇದೇ ಜ್ಞಾನದಿಂದ ಅದ್ಭುತ ಫಸಲು ಸಾಧ್ಯ ಎಂಬ ಅರಿವು ಈಗೀಗ ಮೂಡುತ್ತಿದ್ದರೂ ಅದು ಅಲ್ಪ ಮಾತ್ರ. ದೇಸೀಯ ಜ್ಞಾನ ಸಂಪತ್ತಿನ ಮಹತ್ವ, ಅದು ನಶಿಸುತ್ತಿರುವ ಬಗ್ಗೆ ತೇಜಸ್ವಿಗೆ ಯಾವಾಗಲೋ ತಿಳಿದಿತ್ತು. ಪ್ರತಿಭೆ ಮತ್ತು ದೇಸಿ ಜ್ಞಾನದ

ಅವನತಿಯೇ ಅವರ ಎಷ್ಟೋ ಕಥೆಗಳಿಗೆ ವಸ್ತುವಾಗಿರುವುದು ಇದೇ ಕಾರಣಕ್ಕೆ. ಈ ಅರಿವೇ ಮಾಯಾಲೋಕದಲ್ಲಿ ಮಿಣಿಸ ಗೊಬ್ಬರವಾಗಿ ರೂಪುತಳೆದಿದೆ. ಅಪೂರ್ವವಾದ ದೇಸಿ ಸಂಪತ್ತನ್ನು ಉಳಿಸುವ ಹಾಗೂ ಅದನ್ನು ಜಾಗತೀಕರಣಕ್ಕೆ ಪರ್ಯಾಯವಾಗಿ ನಿಲ್ಲಿಸುವುದು ದೇಶಕ್ಕೆ ಇಂದಿನ ತುರ್ತಾಗಿದೆ. ಮೇಲಿನ ಎಲ್ಲ ವಿವರಗಳೂ ಮಾಯಾಲೋಕದಲ್ಲಿ ಜಾಗತೀಕರಣದ ವಿರೋಧದ ನೆಲೆಯಾಗಿ ರೂಪುಗೊಂಡಿವೆ.

*****

## ಅಧ್ಯಾಯ: ೫
## ಮಾಯಾಲೋಕದಲ್ಲಿ ಪರಿಸರ

ಮಾಯಾಲೋಕ ಪರಿಸರದ ಮಹಾಕಥನ. ಇಡೀ ಕಥೆ ಪ್ರಕೃತಿಯ ಸುತ್ತಲೇ ನಡೆಯುತ್ತ ಅದರ ವಿರಾಟ್ ದರ್ಶನವನ್ನು ಮಾಡಿಸುತ್ತದೆ. ಇಲ್ಲಿ ಪಕ್ಷಿ ಪ್ರಪಂಚ, ಪ್ರಾಣಿ ಪ್ರಪಂಚ, ಸಸ್ಯ ಪ್ರಪಂಚಗಳ ಜೊತೆಗೆ ವೈವಿಧ್ಯಮಯವಾದ ಮನುಷ್ಯ ಪ್ರಪಂಚವಿದೆ. ಇಲ್ಲಿ ಬರುವ ಜೀವಿಗಳ ಸೂಕ್ಷ್ಮಾತಿ ಸೂಕ್ಷ್ಮ ವಿವರಗಳನ್ನು ತೇಜಸ್ವಿ ಗಮನಿಸಿರುವ ಪರಿ ಅಚ್ಚರಿ ಹುಟ್ಟಿಸುತ್ತದೆ. ಕೆಲವೊಮ್ಮೆ ವಿವರಗಳೇ ವಿಪರೀತ ಎನ್ನುವಷ್ಟು ಅತಿಯಾಗಿ ಬರುವುದುಂಟು. ಆದರೆ ಈ ವಿಪರೀತವೇ ಆ ಸಂದರ್ಭದ ದಟ್ಟ ಪ್ರಭಾವವನ್ನು ಓದುಗರಲ್ಲಿ ಮೂಡಿಸಲು ಯಶಸ್ವಿಯಾಗುತ್ತವೆ. ಪರಿಸರದ ಮೇಲೆ ತೇಜಸ್ವಿಯವರಿಗಿದ್ದ ಪ್ರೀತಿ ಹಾಗೂ ಪರಿಸರದಲ್ಲಿ ಸಮತೋಲನ ಕಾಯ್ದುಕೊಳ್ಳಬೇಕೆಂಬ ಅವರ ಕಾಳಜಿ ಕಾದಂಬರಿಯುದ್ದಕ್ಕೂ ಕಾಣಿಸಿಕೊಳ್ಳುತ್ತದೆ.

ತೇಜಸ್ವಿ ಸಾಹತ್ಯದಲ್ಲಿ ಪರಿಸರ ಒಂದು ಅವಿಭಾಜ್ಯ ಅಂಗ. ಪರಿಸರ ಅವರ ಕಥಾನಕದ ಪ್ರಧಾನ ಭೂಮಿಕೆಯಾಗಿ ಬರುವುದನ್ನು ಕಾಣಬಹುದು. ಮಾಯಾಲೋಕದಲ್ಲಿ ಪರಿಸರದ ಚಿತ್ರಣ ಹೆಚ್ಚಾಗಿ ಬಂದಿದೆ. ಇಲ್ಲಿ ಪರಿಸರವೇ ಬಹುಮುಖ್ಯ ಪಾತ್ರ ವಹಿಸುತ್ತದೆ ಎಂದರೂ ತಪ್ಪಿಲ್ಲ. ನಿರೂಪಕರ ಸುತ್ತಮುತ್ತಲ ಪರಿಸರದ ಪರಿಚಯದೊಂದಿಗೆ ಆರಂಭವಾಗುವ ಇದು ಅಂತ್ಯದಲ್ಲಿ ಭಯಂಕರ ಮಳೆಯಾಗಿ ಪ್ರಕೃತಿಯಲ್ಲಿ ಅಗಾಧ ಬದಲಾವಣೆಗಳಾಗುವದರೊಂದಿಗೆ ಪರಿಸರವೇ ಕಾದಂಬರಿಗೆ ಗಂಭೀರ ಮತ್ತು ವಿಭಿನ್ನ ಆಯಾಮವನ್ನು ಕಲ್ಪಿಸುತ್ತದೆ. ಈಗ ಕಾದಂಬರಿಯಲ್ಲಿ ಬಂದಿರುವ ಪರಿಸರದ ವಿವರಗಳನ್ನು ಬಿಡಿಯಾಗಿಯೂ ಇಡಿಯಾಗಿಯೂ ನೋಡೋಣ.

೧

ಗೊಂದಲಗೇರಿ ಕಾದಂಬರಿಯ ಒಂದು ಮಹಾ ರೂಪಕ. ಗೊಂದಲ ಬದುಕಿನ ಈ ಜಗತ್ತಿನ ಪ್ರತಿನಿಧಿ. ಇಲ್ಲಿ ಸದಾ ಮುಷ್ಕರ, ರಸ್ತೆರೋಖೋ, ಪ್ರತಿಭಟನೆಗಳು ನಡೆಯುತ್ತಲೇ ಇರುತ್ತವೆ. ಇಷ್ಟೆಲ್ಲಾ ಗೊಂದಲ ಎಬ್ಬಿಸಿದ್ದ ಮನುಷ್ಯ ವ್ಯಾಪಾರವನ್ನು ಜೋರಾಗಿ ಸುರಿದಮಳೆ ಬುಡಮೇಲು ಮಾಡುತ್ತದೆ. ಮಳೆಗೆ ಮುಂಚೆ ಜೀವಂತವಾಗಿದ್ದ ಹಾಗೂ ಬಹಳ ಮುಖ್ಯವಾಗಿದ್ದ ಹಲವು ವಿಚಾರಗಳು ಮಳೆ ಬಂದೊಡನೆ ಅಪ್ರಸ್ತುತವಾಗುವುದಷ್ಟೇ ಅಲ್ಲ, ಅವು ಸಮಸ್ಯೆಗಳು ಎನಿಸುವುದೇ ಇಲ್ಲ. ಈ ವಿವರಣೆಯನ್ನು ನೋಡಿದರೆ ಆ ಬದಲಾವಣೆ ಸ್ಪಷ್ಟವಾಗಿ ಗೋಚರಿಸುತ್ತದೆ. "ಮಳೆ ಬಂದರೆ ಯಾರು ಬರ್‍ತಾರೋ ಮುಷ್ಕರಕ್ಕೆ? ಮಳೆ ಬರ್‍ತಿದ್ದ ಹಾಗೆ ನಮ್ಮ ಬೇಸಿಗೆ ನಾಟಕಕ್ಕೆ ತೆರೆ ಬೀಳುತ್ತೆಂತ ತಿಳ್ಕೋ.

ಸಿಸ್ನಿ ಮೆಣಸಿನ ಮಡಿ, ಹಳ್ಳದ ಅಡ್ಡಗಟ್ಟೆ ತಕರಾರು, ಇಕ್ಬಾಲ್‌ಸಾಬಿಯ ಪುಕಾರುಗಳು, ಕರೆಂಟಿನವರ ಕಾಟ, ಎಲ್ಲ ಒಂದೇ ಏಟಿಗೆ ಕ್ಲೋಸ್. ತೆರೆ ಬಿತ್ತೂ ಅಂತ ತಿಳಕೊ. ಮತ್ತೆ ತೆರೆ ಮೇಲೆದ್ದಾಗ ರಾಮಾಯಣ ಮುಗಿದು ಮಹಾಭಾರತ ಶುರುವಾಗಿರುತ್ತೆ. ಇವತ್ತು ಏನಾದರೂ ಕೆಲಸ ಇದ್ದರೆ ಕೊಡಿ ಅಂತ ಕೆಲಸದ ಆಳುಗಳು ಅಂಗಲಾಚುತ್ತಿದ್ದಾರಲ್ಲಾ ನಾಳೆ ತೆರೆ ಎದ್ದಾಗ ನಾವು ಅವರಿಗೆ ಅಂಗಲಾಚಿಕೊಂಡು ತಿರುಗಬೇಕು. ಇಲ್ಲದಿದ್ರೆ ಅಗೇಡಿ ಹಾಕಕ್ಕೆ, ಸಸಿ ನಾಟಿಗೆ ಜನ ಇಲ್ಲ. ನಾಳೆ ಚಳುವಳಿನೂ ಇಲ್ಲ ಮುಷ್ಕರನೂ ಇಲ್ಲ. ಕರೆದರೆ ಬರುವವರೂ ಇರೋದಿಲ್ಲ" (ಮಾಯಾಲೋಕ-೧, ಪುಟ-೨೩೮, ಪ್ರ. ಪುಸ್ತಕ ಪ್ರಕಾಶನ,  ಎರಡನೆ ಮುದ್ರಣ-೨೦೦೬, ಲೇ. ಕೆ.ಪಿ.ಪೂರ್ಣಚಂದ್ರ ತೇಜಸ್ವಿ)

ಈ ವಿವರಣೆಯನ್ನ ನೋಡಿದ್ರೆ ನಿಜಕ್ಕೂ ಆಶ್ಚರ್ಯವಾಗದೇ ಇರುವುದಿಲ್ಲ. ಎಷ್ಟೆಲ್ಲ ಗೊಂದಲಗಳಿಂದ ತುಂಬಿಹೋಗಿದ್ದ ಗೊಂದಲಗೇರಿ ಒಂದು ಸಾರಿ ಸುರಿದ ಮಳೆಯಿಂದ ಹೇಗೆ ಮಾರ್ಪಾಡಾಗುತ್ತದೆ ಎನ್ನುವುದೇ ಅಚ್ಚರಿಯ ವಿಷಯ. ಆ ಪರಿವರ್ತನೆಯನ್ನು ತೇಜಸ್ವಿ ಇಲ್ಲಿನ ಮಾತುಗಳಲ್ಲಿ ಅದ್ಭುತವಾಗಿ ಸೆರೆ ಹಿಡಿದಿದ್ದಾರೆ. ಇಲ್ಲಿ ನಾವು ಗಮನಿಸಬೇಕಾಗಿರುವುದು ಲೇಖಕರ ಸೂಕ್ಷ್ಮ ಗ್ರಹಿಕೆಗಿಂತ, ಮಳೆಯಿಂದುಂಟಾದ ಬದಲಾವಣೆಯನ್ನು. ತೇಜಸ್ವಿಗೆ ಪ್ರಕೃತಿಯ ಅಗಾಧ ಶಕ್ತಿಯ ಅರಿವಿತ್ತು. ಈ ಶಕ್ತಿಯ ಮುಂದೆ ಮನುಷ್ಯ ವ್ಯಾಪಾರಗಳೆಲ್ಲ ತೃಣಮಾತ್ರ ಎಂಬುದು ಗೊತ್ತಿತ್ತು. ಆದ್ದರಿಂದಲೇ ಪ್ರಕೃತಿಯಲ್ಲಾಗುವ ಒಂದು ಬದಲಾವಣೆ ಮನುಷ್ಯ ಸಮಾಜದಲ್ಲಿ ಉಂಟು ಮಾಡಬಹುದಾದ ಅಗಾಧ ಬದಲಾವಣೆಯನ್ನು ಇಷ್ಟು ಸಮರ್ಥವಾಗಿ ಕಟ್ಟಿಕೊಡಲು ಸಾಧ್ಯವಾಯಿತು. ಅಲ್ಲದೆ ಮಳೆ ಮಾತ್ರದಿಂದ ಗೊಂದಲಗೇರಿಯ ವಾವಾವರಣದಲ್ಲಿ ಮಾಯವಾದ ಗೊಂದಲಗಳನ್ನು ಅವರ ಸೂಕ್ಷ್ಮಗಳೊಂದಿಗೆ ಹಿಡಿದಿಡಲು ಸಾಧ್ಯವಾಯಿತು. ಪ್ರಕೃತಿ ಬದಲಾವಣೆಗಳಿಗೆ ಮುಂದಾದರೆ ಮನುಷ್ಯನ ಹೋರಾಟಗಳೆಲ್ಲ ಮಸುಕಾಗಿಬಿಡುತ್ತವೆ. ಅವನ ಹೋರಾಟ ಕ್ಷಣ ಮಾತ್ರದಲ್ಲಿ ಧೂಳೀಪಟವಾಗುತ್ತದೆ. ಇಂದಿನ ಅವನ ಯಾವ ವೈಜ್ಞಾನಿಕ ಅಥವಾ ತಾಂತ್ರಿಕಶಕ್ತಿಗಳೂ ಅವನ ರಕ್ಷಣೆಗೆ ನಿಲ್ಲುವುದಿಲ್ಲ. ಇದಕ್ಕೆ ಹಲವು ಉದಾಹರಣೆಗಳನ್ನು ನೀಡಬಹುದು. ಟಾರ್ನೆಡೋ, ಸುನಾಮಿ, ಜ್ವಾಲಾಮುಖಿ, ಭೂಕಂಪ, ಇತ್ಯಾದಿ ಪ್ರಾಕೃತಿಕ ವಿಕೋಪಗಳು ಒಮ್ಮೆ ಪ್ರಳಯಕಾರಿಯಾಗಿ ಗುಡುಗಿದರೆ ಮನುಷ್ಯ ಸ್ತಬ್ಧ; ಮನುಷ್ಯ ಜಗತ್ತೆ ಅಸ್ತವ್ಯಸ್ತ, ಅಲ್ಲೋಲಕಲ್ಲೋಲ. ಅತ್ಯಂತ ಆಧುನಿಕ ಜಗತ್ತಿನ ಯಾವ ಆಧುನಿಕ ತಂತ್ರಜ್ಞಾನವೂ ಈ ಶಕ್ತಿಗಳನ್ನು ತಡೆಯುವುದಾಗಲೀ, ಎದುರಿಸುವುದಾಗಲೀ ಸಾಧ್ಯವೇ ಇಲ್ಲ. ಪ್ರಕೃತಿಯ ಮೇಲೆ ನಿರಂತರ ದಬ್ಬಾಳಿಕೆ ನಡೆಸುತ್ತ ಅದಕ್ಕೆದುರಾಗಿ ಹೋಗುತ್ತಿರುವ ಮನುಷ್ಯ ಇದನ್ನು ಅರ್ಥಮಾಡಿಕೊಳ್ಳಬೇಕಿದೆ. ಈ ಆಶಯ ತೇಜಸ್ವಿ ಸಾಹಿತ್ಯದ ಅಂತರಾಳದಲ್ಲಿ ಗುಪ್ತಗಾಮಿನಿಯಾಗಿ ಹರಿಯುವುದನ್ನು ಕಾಣಬಹುದು.

ಇದು ಭಯಂಕರವಾಗಿ ಸುರಿದ ಮಳೆಯಿಂದ ಉಂಟಾದ ಬದಲಾವಣೆ. ಕೇವಲ ವಾತಾವರಣದಲ್ಲಾದ ಹವಾಮಾನ ಬದಲಾವಣೆಯೊಂದೆ ಗೊಂದಲಗೇರಿಯಲ್ಲಿ ತಂದ ಬದಲಾವಣೆಯನ್ನು ನೋಡಿ "ಮೋಡ ಬರುವುದಕ್ಕೆ ಎಷ್ಟೋ ಮೊದಲೇ ಇದು ಮಳೆಗಾಲದ ಗಾಳಿ ಎಂದು ನನಗೆ ಅನ್ನಿಸಿತ್ತು. ಗಾಳಿಯಲ್ಲಿನ ಥಂಡಿಗೆ ಬಿಸಿಲು ತನ್ನ ಚುರುಕನ್ನೇ ಕಳೆದುಕೊಂಡಿತ್ತು. ಸೂರ್ಯ ಹಲ್ಲು ಉಗುರುಗಳನ್ನು ಕಿತ್ತ ಹುಲಿಯಂತೆ ಆಕಾಶದಲ್ಲಿ ಅಡ್ಡಾಡುತ್ತಿದ್ದ. ಒಂದೇ ಒಂದು ಹನಿ ಮಳೆ ಬೀಳದಿದ್ದರೂ ಆ ತೇವಭರಿತ ಥಂಡಿ ಗಾಳಿಗೆ ಬಾಡಿ ನಿಂತಿದ್ದ ಕಾಫಿ ಗಿಡಗಳ ಎಲೆಗಳೆಲ್ಲಾ ಸ್ವಲ್ಪ

ತಲೆಯೆತ್ತಿದ್ದವು. ಬೇಸಿಗೆಯಲ್ಲಿ ಸುಲಭವಾಗಿ ಹಾಕಲು ತೆಗೆಯಲು ಬರುತ್ತಿದ್ದ ಬಾಗಿಲು ಕಿಟಕಿಗಳೆಲ್ಲಾ ಗಾಳಿಯ ತೀವಕ್ಕೆ ಒಂದೇ ದಿನದಲ್ಲಿ ಒಗ್ಗಿ ಈಗ ಗುದ್ದಿದಬ್ಬಿ ಹಾಕಬೇಕಾಗಿತ್ತು. ಒಂದೇ ಒಂದು ಹನಿ ಮಳೆ ಬೀಳದಿದ್ದರೂ ಇಡಿ ವಾತಾವರಣದಲ್ಲಿ ಎಂಥ ಮಹತ್ತಾದ ಪರಿವರ್ತನೆಯಾಯ್ತೆಂದರೆ ಕೆಲವೇ ಗಂಟೆಗಳ ಹಿಂದೆ ಬಿರು ಬೇಸಗೆಯಲ್ಲಿ ಬಸವಳಿಯುತ್ತಿದ್ದ ಪರಿಸರ ನಡು ಮಳೆಗಾಲದ ನಡುವೆ ಇರುವಂತೆ ಪರಿವರ್ತನೆಯಾಗಿತ್ತು. ಮಳೆಗಾಲದ ಮುನ್ಸೂಚನೆ ಎಂದು ಗಾಳಿ ನೋಡಿ ನಾನು ಭಾಪಿಸಿದ್ದರೂ ಈ ರೀತಿಯ ಹಠಾತ್ ನಾಟಕೀಯ ಪರಿವರ್ತನೆಯನ್ನು ನಾನು ನಿರೀಕ್ಷಿಸಿರಲಿಲ್ಲ." (ಮಾಯಾಲೋಕ-೧, ಪುಟ-೨೩೯, ಪ್ರ. ಪುಸ್ತಕ ಪ್ರಕಾಶನ, ಎರಡನೆ ಮುದ್ರಣ-೨೦೦೬, ಲೇ. ಕೆ.ಪಿ.ಪೂರ್ಣಚಂದ್ರ ತೇಜಸ್ವಿ)

ಇದೇ ತೆರನಾದ ಮತ್ತೊಂದು ಬದಲಾವಣೆ ಇದೇ ಆಶಯವನ್ನು ಪ್ರಸ್ತುತಪಡಿಸುತ್ತದೆ. "ಅಡಕೆ ತೋಟದ ಪಕ್ಕದಲ್ಲಿ ಹರಿಯುತ್ತಿದ್ದ ಹಳ್ಳದಲ್ಲಿ ಯದ್ವಾತದ್ವಾ ನೀರು ನುಗ್ಗಿದ್ದರಿಂದ ಅದು ತೋಟದ ನಡುವೆ ಹರಿದು ಬಂದು ಒಂದು ಸಾಲು ಅಡಕೆ ಮರಗಳು ಬುಡಸಮೇತ ಉರುಳಿ ಬಿದ್ದಿದ್ದವು. ಆದರೆ ನಾವು ಊಹಿಸಿದಷ್ಟು ಅನಾಹುತ ಆಗಿರಲಿಲ್ಲ. ಬಹುದೊಡ್ಡ ಅನಾಹುತ ನಮ್ಮ ತೋಟದ ಬೇಲಿ ಆಚೆ ಸಂಭವಿಸಿತ್ತು. ಕೆಲವು ಅಡಕೆ ಮರಗಳು ಅಣ್ಣಪ್ಪಣ್ಣನ ಮೆಣಸಿನ ಮಡಿಗೆ ನೀರು ತಿರುಗಿಸಲು ತಿಮ್ಮಾಬೋಯಿ ಕೈಲಿ ಹಾಕಿಸಿದ್ದ ಕಟ್ಟೆ ಹತ್ತಿರ ಅಡ್ಡಡ್ಡ ಸಿಕ್ಕಿಕೊಂಡು ಮೇಲಿಂದ ಬರುವ ಕಸವನ್ನೆಲ್ಲಾ ಅಲ್ಲಿ ಬೆಟ್ಟದಂತೆ ಒಟ್ಟಾಗಿ ಉರವಣಿಸಿ ಬರುತ್ತಿದ್ದ ಪ್ರವಾಹವನ್ನು ಅಡ್ಡ ತಿರುಗಿಸಿತ್ತು. ಅದರ ಪರಿಣಾಮ ಎಂದರೆ ಹಲವು ಎಕರೆಗಳಷ್ಟು ವಿಸ್ತಾರವಾಗಿದ್ದ ಜೌಗು ಸಂಪೂರ್ಣ ಅಂತರ್ಗತವಾಗಿ ಅದರ ಬದಲು ಆ ಜಾಗದಲ್ಲಿ ಇಣುಕಿದರೆ ತಲೆ ತಿರುಗುವಷ್ಟು ಆಳವಾದ ಕಮರಿ ನಿರ್ಮಾಣವಾಗಿತ್ತು. ಆ ಕಮರಿ ಊರಳ್ಳಿ ಗದ್ದೆ ಬಯಲಿನ ತುದಿಯವರೆಗೂ ಮುಂದುವರಿದು ಅದರಾಚೆ ಎರಡು ಗುಡ್ಡಗಳ ನಡುವೆ ಮಳೆ ಪ್ರವಾಹದ ಕೆನ್ನೀರು ರಭಸದಿಂದ ಹರಿಯುವುದು ನಮಗೆ ನಿಂತಲ್ಲಿಂದಲೇ ಕಾಣುತ್ತಿತ್ತು" (ಮಾಯಾಲೋಕ-೧, ಪುಟ-೨೪೫, ಪ್ರ. ಪುಸ್ತಕ ಪ್ರಕಾಶನ, ಎರಡನೆ ಮುದ್ರಣ-೨೦೦೬, ಲೇ. ಕೆ.ಪಿ.ಪೂರ್ಣಚಂದ್ರ ತೇಜಸ್ವಿ)

ಯಾವ ಜೌಗು ಕಾದಂಬರಿಯ ಎಲ್ಲ ಘಟನೆಗಳಿಗೂ ಮೂಲಸ್ಥಾನವಾಗಿತ್ತೋ ಆ ಜೌಗು ರಭಸದಿಂದ ಸುರಿದ ಮಳೆಯಿಂದಾಗಿ ನುಗ್ಗಿದ ಪ್ರವಾಹದ ದವಡೆಗೆ ಸಿಲುಕಿ ಮಾಯವಾಗಿತ್ತು. ನಿರೂಪಕನ ಊಹೆಗೂ ಮೀರಿ ಅಲ್ಲಿ ಬದಲಾವಣೆಯಾಗಿತ್ತು. ಕಾದಂಬರಿಯಲ್ಲಿ ನಿರೂಪಕನ ನಿರೀಕ್ಷೆಗೆ ವಿರುದ್ಧ ಪ್ರಕ್ರಿಯೆಗಳು ನಡೆಯುವುದನ್ನು ಕಾಣಬಹುದು. ಅಣ್ಣಪ್ಪಣ್ಣ ತನ್ನ ಸ್ನೇಹಿತರಾದ ಬಾಬು, ಮಂಜನನ್ನು ಕರೆದುಕೊಂಡು ಬಂದು ಏನೆಲ್ಲ ಪ್ರಯತ್ನ ನಡೆಸಿ ನಾಟಿ ಮಾಡಿದ್ದ ಮೆಣಸಿನ ಮಡಿ ಕುರುಹೂ ಇಲ್ಲದಂತೆ ಮಾಯವಾಗಿತ್ತು. ಮೆಣಸಿನ ಮಡಿಗೆ ನೀರುಣಿಸಲು ಹಳ್ಳಕ್ಕೆ ಹಾಕಿದ್ದ ಅಡ್ಡಗಟ್ಟೆ ನೀರಿನ ರಭಸದಲ್ಲಿ ಕರಗಿ ಹೋಗಿತ್ತು. ಯಾವ ಕಾರಣಕ್ಕೆ ಊರಳ್ಳಿ-ಮಕ್ಕಿಗದ್ದೆಯವರ ನಡುವೆ ಜಗಳವಾಗಿತ್ತೋ ಅವ್ಯಾವೂ ಇಲ್ಲಿ ಉಳಿದಿರಲಿಲ್ಲ. ಒಟ್ಟಿನಲ್ಲಿ ಯಾವುದಕ್ಕೂ ಅವಕಾಶವೇ ಇಲ್ಲದಂತೆ ಎಲ್ಲವೂ ಮಾಯವಾಗಿತ್ತು.

೨

ತೇಜಸ್ವಿ ಪರಿಸರದ ಸೌಮ್ಯ ಮುಖವನ್ನೇಗೋ ಹಾಗೆ ರೌದ್ರ ಮುಖವನ್ನೂ ಚೆನ್ನಾಗೇ ಬಲ್ಲವರಾಗಿದ್ದರು. ಪರಿಸರದ ಒಂದು ಭಾಗವೇ ಆದ ಮಲೆನಾಡಿನ ರೌದ್ರ ಮುಖವನ್ನು ಮಾಯಾಲೋಕದಲ್ಲಿ ಮಂಡಿಸುತ್ತಾರೆ. ಮಲೆನಾಡು ಎಂದೊಡನೆ ನೆನಪಾಗುವುದು ಅಲ್ಲಿನ ದಟ್ಟ ಕಾಡು, ಎಲ್ಲೆಲ್ಲೂ ಹಬ್ಬಿರುವ ಹಸಿರು ಸಾಮ್ರಾಜ್ಯ, ಪರ್ವತ ಸರಣಿ ಹಾಗೂ ಕಣ್ತುಂಬುವಷ್ಟು ಕಾಣುವ ಪ್ರಕೃತಿ ಸೌಂದರ್ಯ–ಇದು ಮಲೆನಾಡಿನ ಕುರಿತು ಬಹುತೇಕರಿಗಿರುವ ಕಲ್ಪನೆ. ಈ ಕಲ್ಪನೆ ನಿಜವೂ ಹೌದು. ಕುವೆಂಪು ಕಾವ್ಯಗಳಲ್ಲಿ ಈ ಸೌಂದರ್ಯ ಇಮ್ಮಡಿಯಾಗಿ ಕಾಣುತ್ತದೆ. ಹುಟ್ಟಿದರೆ ಮಲೆನಾಡಿನಲ್ಲೇ ಹುಟ್ಟಬೇಕು; ಬದುಕಿದರೆ ಮಲೆನಾಡಿನಲ್ಲೇ ಬದುಕಬೇಕು ಎನಿಸುತ್ತದೆ. ಇದು ಮಲೆನಾಡಿನ ಪ್ರಕೃತಿ ಸೌಂದರ್ಯದ ಮುಖ. ಇದಕ್ಕೆ ಒಂದು ವಿಕೃತ, ಭಯಂಕರ ಮುಖವೂ ಇದೆ. ಈ ಭೀಕರ, ಭಯಂಕರ ಮುಖವನ್ನು ನೋಡಿದರೆ, ಕೇಳಿದರೆ ಬಹುಷಃ ಯಾರಿಗೂ ಮಲೆನಾಡಿನಲ್ಲಿ ಬದುಕುವ ಧೈರ್ಯ ಬರುವುದಿಲ್ಲ. ಆ ಭಯಂಕರತೆಯನ್ನು ತೇಜಸ್ವಿ ಅದ್ಭುತವಾಗಿ ಪದಗಳಲ್ಲಿ ಸೆರೆ ಹಿಡಿದಿದ್ದಾರೆ.

“ಈ ಮಲೆನಾಡಿನಲ್ಲಿ ಎಲ್ಲವೂ ಅತಿರೇಖವೇ! ಮಳೆಗಾಲದಲ್ಲಿ ಧೋ ಧೋ ಎಂದು ಹಗಲು ರಾತ್ರಿಗಳೆನ್ನದೆ ಉರವಣಿಸಿ ಸುರಿಯುವ ಮಳೆ. ಕಾಲಿಟ್ಟಲ್ಲಿ ಕೆಸರು. ಕಾಲು ಸಂದಿಗಳಲ್ಲೆಲ್ಲಾ ಕೆಸರು ಹುಣ್ಣು. ಕಿವಿಯ ಮೇಲೆ ಗರಗಸ ಆಡಿಸಿದಂತೆ ಬಂದು ಅಪ್ಪಳಿಸುವ ಜೀರುಂಡೆಗಳ ನಿರಂತರ ಜೀರ್ದನಿ. ಒಂದು ಸಾರಿ ಈ ಮಳೆ ನಿಂತರೆ ಸಾಕಪ್ಪ ಎನ್ನಿಸದೆ ಮಳೆಗಾಲ ವಿದಾಯ ಹೇಳುವುದಿಲ್ಲ. ಅದು ನಿಲ್ಲುತ್ತಿದ್ದಂತೆಯೇ ತಂಗಾಳಿ ಮೆಲ್ಲಗೆ ಮೋಹಿನಿಯಂತೆ ಬಂದಿದ್ದು ಒಂದೆರಡು ದಿನಗಳೊಳಗೆ ಕೊರೆಯುವ ಚಳಿಯಾಗುತ್ತದೆ. ಬಚ್ಚಲು ಹಂಡೆಯ ಪಕ್ಕ ಬೆಂಕಿ ಕಾಯಿಸುತ್ತಾ ಕುಳಿತವರಿಗೆ ಮೇಲೇಳುವ ಮನಸ್ಸೇ ಬರುವುದಿಲ್ಲ. ನೀರು ಮುಟ್ಟಿದರೆ ಮಂಜುಗಡ್ಡೆ ಮುಟ್ಟಿದಂತಾಗಿ ಎಲ್ಲರೂ ಕಾಟಾಚಾರಕ್ಕೆ ಬೆಳಿಗ್ಗೆ ಎದ್ದು ಮುಖ ತೊಳೆಯುತ್ತಾರೆ. ಹಾಲಿಗೆ ಎಷ್ಟು ಮಜ್ಜಿಗೆ ಸುರಿದು ಹೆಪ್ಪು ಹಾಕಿದರೂ ಮೊಸರೇ ಆಗುವುದಿಲ್ಲ. ರಾತ್ರಿ ಮಲಗಿದರೆ ಹಾಸಿಗೆ ಸಹ ತಣ್ಣಗೆ ಕೊರೆಯುತ್ತದೆ. ಮೈ ಶಾಖಕ್ಕೆ ಹಾಸಿಗೆ ಕೊಂಚವಾದರೂ ಬೆಚ್ಚಗಾಗುವುದಕ್ಕೆ ಗಂಟೆಗಟ್ಟಲೆ ಅಲ್ಲಾಡದೆ ಸತ್ತ ಹೆಣದ ಹಾಗೆ ಹಾಸಿಗೆ ಮೇಲೆ ಬಿದ್ದುಕೊಂಡಿರಬೇಕು. ಮೈಯೆಲ್ಲಾ ಹುರುಡೆ ಎದ್ದು, ಕಾಲು ತುಟಿ ಎಲ್ಲಾ ಬಿರುಕುಬಿಟ್ಟು ರಕ್ತ ಒಸರುತ್ತದೆ. ಚಳಿಗಾಲ ಒಂದು ಸಾರಿ ತೊಲಗಿದರೆ ಸಾಕಪ್ಪಾ ಎನ್ನಿಸುವವರೆಗೂ ಚಳಿ ಗಡಗಡ ನಡುಗಿಸುತ್ತದೆ. ಜನ ಶಿವರಾತ್ರಿ ಕಳೆದು ಚಳಿ ನಿರ್ಗಮಿಸುವುದನ್ನೇ ಕಾತರದಿಂದ ಕಾಯುತ್ತಾರೆ. ಮಾರ್ಚ ತಿಂಗಳು ಮುಗಿಯುತ್ತಾ ಬಂದರೂ ಮಳೆಯ ಸುಳಿವೇ ಇಲ್ಲ. ಬೆಳಗಿನ ಹೊತ್ತು ಸೂರ್ಯೋದಯಕ್ಕೆ ಮುನ್ನ ಮಾತ್ರ ವಾತಾವರಣ ತಂಪಾಗಿರುತ್ತದೆ, ತೋಟಗಳಲ್ಲಿ ಎಲೆಗಳ ಮೇಲೆ ಕುಳಿತ ಮಂಜಿನ ಹನಿಗಳು ಜಾರಿ ತರಗೆಲೆಗಳ ಮೇಲೆ ಬೀಳುವ ಸದ್ದು ತಟತಟ ಎಂದು ಶಬ್ದ ಮಾಡುತ್ತಾ ಮಳೆಯ ಭ್ರಮೆ ಹುಟ್ಟಿಸುತ್ತಿತ್ತು. ಸೂರ್ಯ ಮೇಲೆದ್ದು ಬಿಸಿಲಿನ ಪ್ರಕರ ಕಿರಣಗಳು ತಾಗಿದ್ದ ಕೂಡಲೇ ಮಂಜು ಮಾಯವಾಗಿ ತರಗೆಲೆಗಳ ಮೇಲೆ ಬಿದ್ದಿದ್ದ ನೀರ ಪಸೆಯೆಲ್ಲಾ ಕೆಲವೇ ಕ್ಷಣದೊಳಗೆ ಅಂತರ್ಧಾನವಾಗಿ, ಉರಿ ಬಿಸಿಲು ಬೆಂಕಿ ಬಿದ್ದ ಹಾಗೆ ಮಲೆನಾಡಿನ ದಟ್ಟ ಕಾಡುಗಳ ಮೇಲೆ ಪ್ರಸರಿಸುತ್ತಿತ್ತು. ಸಂಜೆಯಾಗುತ್ತಿದ್ದಂತೆಯೇ ಮಧ್ಯಾಹ್ನದ ಬಿಸಿಲಲ್ಲಿ ಬಿಸಿ ಬಾಣಲೆಯಲ್ಲಿ ಕಾಯ್ದು ಕಾಡುಗಳಿಗೆ ಹೊಗೆಯ ಮುಸುಗು ಕವಿಯುತ್ತದೆ. ಒಣಗಿ ನಿಂತ ಹುಲ್ಲು ಹಳು ಮೊದಲಾದವಕ್ಕೆಲ್ಲಾ ಬೆಂಕಿ ಕೊಟ್ಟು ಸುಟ್ಟರೆ ಬೇಗ ಹೊಸ ಚಿಗುರು ಬಂದು ದನಗಳಿಗೆ ಮೇವು ದೊರೆಯುತ್ತದೆ ಎಂದು

ಜನಗಳೇ ಬೆಂಕಿ ಕೊಟ್ಟು ಕಾಳ್ಗಿಚ್ಚು ಪಳಿಸುತ್ತಿದ್ದರು. ರಾತ್ರಿಯಾದರೆ ದೂರದ ಗುಡ್ಡಗಳಲ್ಲಿ ಕಾಳ್ಗಿಚ್ಚು ಕೆಂಪು ಸೀಮೆಸುಣ್ಣದಲ್ಲಿ ಎಳೆದ ಗೀರಿನಂತೆ ಸಾಲಾಗಿ ಉರಿಯುವುದು ಕಾಣುತ್ತಿತ್ತು. ಇದು ಜನಗಳು ಹಿಂದಿನಿಂದ ಅನುಸರಿಸಿಕೊಂಡು ಬಂದ ಪದ್ಧತಿಯಾದರೂ ಸಹ್ಯಾದ್ರಿ ಕಾಡುಗಳಿಗೆ ಯುಪೆಟೋರಿಯಂ ಕಳೆ ಕಾಲಿಟ್ಟ ಮೇಲೆ ಕಾಳ್ಗಿಚ್ಚಿನಿಂದಾಗುವ ಅನಾಹುತದ ಪ್ರಮಾಣ ಹೆಚ್ಚುತ್ತಾ ಬಂದಿದ್ದು ಯಾರ ಗಮನಕ್ಕೂ ಬಂದಿರಲಿಲ್ಲ. ಯುಪೆಟೋರಿಯಂ ಕಳೆ ಮರಕ್ಕೆ ಸುತ್ತಿಕೊಂಡು ಬಳ್ಳಿಯಂತೆ ಎತ್ತರಕ್ಕೆ ಬೆಳೆಯುತ್ತದೆ. ಹಿಂದೆಲ್ಲಾ ಕಾಡಿಗೆ ಬೆಂಕಿ ಬಿದ್ದಾಗ ಕೇವಲ ನೆಲಮಟ್ಟದಲ್ಲಿದ್ದ ಹುಲ್ಲು ಸುಡುತ್ತಿದ್ದರಿಂದ ದೊಡ್ಡ ದೊಡ್ಡ ಎತ್ತರದ ಮರಗಳಿಗೆ ಹೆಚ್ಚು ಘಾಸಿಯಾಗುತ್ತಿರಲಿಲ್ಲ. ಆದರೆ ಈಗ ಮರ ತಬ್ಬಿ ಹಿಡಿದಿರುವ ಯುಪೆಟೋರಿಯಂ ಜ್ವಾಲೆಕಾರುತ್ತಾ ಉರಿದರೆ ದೊಡ್ಡ ಮರಗಳ ತೊಗಟೆ ಬಹಳ ಎತ್ತರದವರೆಗೂ ಸುಟ್ಟು ಸಾಯುತ್ತಿದ್ದವು. ಕಾಡು ಪ್ರಾಣಿಗಳಿಗಂತೂ ಕಾಳ್ಗಿಚ್ಚು ಬಿದ್ದರೆ ಯುಪೆಟೋರಿಯಂ ಯಮಪಾಶವೇ ಸರಿ. ಯುಪೆಟೋರಿಯಂ ಬೆಳೆದಿದ್ದ ಕಾಡಿಗೆ ಬೆಂಕಿ ಬಿದ್ದರೆ ಕಾಳ್ಗಿಚ್ಚು ಅಕ್ಷರಶಃ ನಾಗರಹಾವಿನಂತೆ ಭುಸುಗುಡುತ್ತಾ ವೇಗವಾಗಿ ವ್ಯಾಪಿಸುವುದನ್ನು ನೋಡಿದ್ದೇನೆ. ಯುಪೆಟೋರಿಯಂ ಜಿಗ್ಗಿನಲ್ಲಿ ತೊಡಗಿಕೊಂಡ ಜಿಂಕೆ, ಕಾಡುಕೋಣ, ಇತ್ಯಾದಿ, ಮಿಂಚಿನ ಓಟಗಾರರೂಸಹ ಬೆಂಕಿಗಿಂತ ವೇಗವಾಗಿ ಓಡಿ ತಪ್ಪಿಸಿಕೊಳ್ಳಲಾರದೆ ಸುಟ್ಟು ಸತ್ತಿರುವ ಬೇಕಾದಷ್ಟು ಘಟನೆಗಳಿವೆ" (ಮಾಯಾಲೋಕ-೧, ಪುಟ-೬೧,೬೨,೬೩, ಪ್ರ. ಪುಸ್ತಕ ಪ್ರಕಾಶನ, ಎರಡನೆ ಮುದ್ರಣ-೨೦೦೬, ಲೇ. ಕೆ.ಪಿ.ಪೂರ್ಣಚಂದ್ರ ತೇಜಸ್ವಿ)

ಮಲೆನಾಡಿನ ಈ ವಿವರಣಾತ್ಮಕ ಚಿತ್ರಣ ಹಲವು ನೆಲೆಗಳಿಂದ ನಮಗೆ ಮುಖ್ಯವಾಗುತ್ತದೆ. ಮಲೆನಾಡು ಎಂದರೆ ಸೌಂದರ್ಯ ಎಂದೇ ಭಾವಿಸಿದ್ದ ನಮಗೆ ಈ ಭಯಂಕರ, ರೌದ್ರ ಚಿತ್ರಣವನ್ನು ನೋಡಿ ಎದೆ ನಡುಗುತ್ತದೆ. ಈ ವಿವರಣೆಯನ್ನು ನೋಡಿದರೆ ತೇಜಸ್ವಿ ಮಲೆನಾಡನ್ನು ಬಹುಷಃ ಕುವೆಂಪು ಅವರಿಗಿಂತ ಸೂಕ್ಷ್ಮವಾಗಿ ಮತ್ತು ಅವರಿಗಿಂತ ಭಿನ್ನ ನೆಲೆಯಲ್ಲಿ ಗ್ರಹಿಸಿದ್ದರು ಎನಿಸುತ್ತದೆ. ಕುವೆಂಪು ಮಲೆನಾಡನ್ನು ಆರಾಧನೆಯ ದೃಷ್ಟಿಯಿಂದ ನೋಡಿ ಆನಂದಿಸಿದರು. ತೇಜಸ್ವಿ ಮಲೆನಾಡನ್ನು ಸಾಹಸ ದೃಷ್ಟಿಯಿಂದ ನೋಡಿ ಸಾಧಿಸಿದರು. ಹಾಗಾಗಿಯೇ ಅವರಿಗಿಂತ ವಿಭಿನ್ನವಾಗಿ ಮಲೆನಾಡಿನ ಭಯಂಕರತೆಯನ್ನು ಚಿತ್ರಿಸಲು ಸಾಧ್ಯವಾಯಿತು. ಕಾಡಿನ ಬಗ್ಗೆ ಅಪಾರ ಪ್ರೀತಿ ಹೊಂದಿದ್ದ ಹಾಗೂ ಅದರ ವಿಸ್ಮಯಗಳ ಹುಡಕಾಟಕ್ಕೆ ಸದಾ ಹಾತೊರೆಯುತ್ತಿದ್ದ ತೇಜಸ್ವಿಗೆ ಮಾತ್ರವೇ ಕಾಡಿನ ಈ ಮುಖವನ್ನು ಚಿತ್ರಿಸಲು ಸಾಧ್ಯ ಎಂದರೆ ಅದು ಅತಿಶಯೊಕ್ತಿಯಲ್ಲ.

ಗ್ರಹಿಕೆಯ ನೆಲೆಯಲ್ಲೂ ಈ ಚಿತ್ರಣ ಮತ್ತೊಂದು ಆಶ್ಚರ್ಯ ಉಂಟು ಮಾಡುತ್ತದೆ. ಮೂರೂ ಕಾಲಮಾನಗಳಲ್ಲಿ ಮಲೆನಾಡಿನ ಪರಿಸರದ ಬದಲಾವಣೆಗಳನ್ನು ಅದರ ಸೂಕ್ಷ್ಮಾತಿ ಸೂಕ್ಷ್ಮ ವಿವರಗಳಲ್ಲಿ ತೇಜಸ್ವಿ ಸಮರ್ಥವಾಗಿ ಗ್ರಹಿಸಿರುವುದು ಕಂಡುಬರುತ್ತದೆ. ಹವಾಮಾನ ವೈಪರೀತ್ಯದಿಂದ ಪ್ರಕೃತಿಯಲ್ಲಾಗುವ ಬದಲಾವಣೆಗಳು, ಈ ಬದಲಾವಣೆಗಳ ಕಾರಣದಿಂದ ಮನುಷ್ಯ ಜೀವನದಲ್ಲಿ ಸಂಭವಿಸುವ ಏರುಪೇರುಗಳು, ಆ ಕಾಲದಲ್ಲಿ ಅಲ್ಲಿನ ಜನರ ಮನಸ್ಥಿತಿ, ಯುಪೆಟೋರಿಯಂ ಎಂಬ ಆಧುನಿಕ ಕಳೆಯಿಂದ ಉಂಟಾಗುತ್ತಿರುವ ಅರಣ್ಯ ನಾಶ-ಮುಂತಾದ ಹತ್ತು ಹಲವು ವಿಚಾರಗಳನ್ನು ಅದರ ವಿವಿಧ ನೆಲೆಗಳಲ್ಲಿ ಗ್ರಹಿಸಿರುವ ತೇಜಸ್ವಿ ನಮಗೆ ಅದ್ಭುತವಾಗಿ ಕಾಣುತ್ತಾರೆ. ಇಲ್ಲಿ ಗಮನಿಸಬೇಕಾದ ಮತ್ತೊಂದು ಅಂಶ ಎಂದರೆ ಪರಿಸರದಲ್ಲಾಗುವ ಬದಲಾವಣೆಗಳು ಕೇವಲ ಮನುಷ್ಯ ಜೀವನದಲ್ಲುಂಟು ಮಾಡಿದ ಏರುಪೇರುಗಳನ್ನಷ್ಟೇ ತೇಜಸ್ವಿ ಹೇಳುವುದಿಲ್ಲ. ಬದಲಿಗೆ ಕಾಡಿನಲ್ಲೇ

ಬೆರೆತು ಬದುಕುವ ಜೀವ ವೈವಿಧ್ಯದ ಮೇಲೆ ಈ ಬದಲಾವಣೆ ಉಂಟುಮಾಡುವ ಪರಿಣಾಮಗಳನ್ನೂ ಹೇಳುತ್ತಾರೆ. ಅವರ ಈ ಗ್ರಹಿಕೆಯೇ ತೇಜಸ್ವಿಯವರದು ಮನುಷ್ಯ ಕೇಂದ್ರಿತ ಚಿಂತನೆಯಲ್ಲ ಬದಲು ಜೀವಕೇಂದ್ರಿತ ಚಿಂತನೆ ಎಂಬುದನ್ನು ಸ್ಪಷ್ಟಪಡಿಸುತ್ತದೆ. ಮಲೆನಾಡಿನಲ್ಲಿ ಹುಟ್ಟಿ ಮೈಸೂರಿನಲ್ಲಿ ಬೆಳೆದರೂ ತೇಜಸ್ವಿ ಮಲೆನಾಡಿನ ಪರಿಸರವನ್ನು ವೈಜ್ಞಾನಿಕವಾಗಿ ಮತ್ತು ಸಾಮಾಜಿಕ ನೆಲೆಯಲ್ಲಿ ಗ್ರಹಿಸಿದ್ದರು. ಈ ಕಾರಣದಿಂದ ತೇಜಸ್ವಿ ಒಬ್ಬ ಜೀವವಿಜ್ಞಾನಿಯೂ, ಪರಿಸರ ವಿಜ್ಞಾನಿಯೂ ಹಾಗೂ ಸಮಾಜವಿಜ್ಞಾನಿಯೂ ಹೌದು ಎಂದು ನಂಬುವುದರಲ್ಲಿಯಾವ ಅನುಮಾನವೂ ಉಳಿಯುವುದಿಲ್ಲ.

೩

ತೇಜಸ್ವಿ ಚಿಂತನೆ ಜೀವಕೇಂದ್ರಿತ ನೆಲೆಯಿಂದ ಪ್ರೇರಿತವಾದದ್ದು ಎಂದು ಈಗಾಗಲೇ ಹೇಳಲಾಗಿದೆ. ಹೀಗಾಗಿ ಅವರಿಗೆ ಯಾವುದೂ ಅಮುಖ್ಯವಲ್ಲ. ಅವರ ಜೀವಕೇಂದ್ರಿತ ನೆಲೆಯ ಚಿಂತನೆಗೆ ಇಲ್ಲೊಂದು ಸ್ಪಷ್ಟನೆಯಿದೆ. ಎಲ್ಲರ ಔದಾಸೀನ್ಯಕ್ಕೆ ಗುರಿಯಾಗಿ ಯಾರ ಬರವಣಿಗೆಯಲ್ಲೂ ಸ್ಥಾನ ಗಿಟ್ಟಿಸಿಕೊಳ್ಳದ ಪಕ್ಷಿಯೊಂದರ ಬಗ್ಗೆ ತೇಜಸ್ವಿ ಹೀಗೆ ಬರೆಯುತ್ತಾರೆ "ಹುಂಡುಕೋಳಿಗಳು ಜೌಗಿನ ಪಕ್ಕಿಯಾದ್ದರಿಂದ ಇವುಗಳ ಕಾಟ ಶುರುವಾಗುತ್ತಿತ್ತು. ಇವುಗಳ ಶರೀರ ರಚನೆ ನೀರಿಗೆ ಸರಿಯಾಗಿ ಹೊಂದಿಕೊಂಡಿದೆ. ಕಾಲಿನ ಅರ್ಧದಷ್ಟು ವಿಸ್ತಾರವಾಗಿರುವ ಉದ್ದ ಬೆರಳುಗಳು ಕೆಸರಲ್ಲಿ ಹೂತುಕೊಳ್ಳದೆ ನಡೆಯಲು ತಕ್ಕಂತಿವೆ. ಕೊಕ್ಕರೆಯ ಕೊಕ್ಕನ್ನು ಹೋಲುವ ಕೊಕ್ಕುಗಳು ನೀರಿನಲ್ಲಿ ಮುಳುಗಿರುವ ಆಹಾರವನ್ನಾಗಲೀ, ಜಲಚರಗಳನ್ನಾಗಲೀ ಹಿಡಿಯಲು ತಕ್ಕಂತಿವೆ. ಇವು ಜೌಗಿನ ಪಕ್ಕಿಗಳೇ ಹೊರತು ಬಾತುಗಳಂತೆ ನೀರಿನಲ್ಲೇ ಈಜಾಡಿಕೊಂಡಿರುವ ಹಕ್ಕಿಗಳಲ್ಲ. ಯಾವಾಗಲೂ ಜೌಗಿನ ಸಮೀಪದಲ್ಲಿ ಆಹಾರಾನ್ವೇಷಣೆ ಮಾಡುತ್ತಾ ತಿರುಗುತ್ತವೆ" (ಮಾಯಾಲೋಕ-೧, ಪುಟ-೪, ಪ್ರ. ಪುಸ್ತಕ ಪ್ರಕಾಶನ, ಎರಡನೆ ಮುದ್ರಣ-೨೦೦೬, ಲೇ. ಕೆ.ಪಿ.ಪೂರ್ಣಚಂದ್ರ ತೇಜಸ್ವಿ)

ಈ ಹುಂಡುಕೋಳ ಬಗ್ಗೆ ಈವರೆಗೆ ಯಾವ ಲೇಖಕರೂ ಪ್ರಸ್ತಾಪಿಸದಿರುವುದಕ್ಕೆ ಅವರು ಹೀಗೆ ಬರೆಯುತ್ತಾರೆ "ಹುಂಡುಕೋಳಿಗಳು ಕರ್ನಾಟಕದ ಎಲ್ಲೆಡೆ ನೀರಿನ ಸಮೃದ್ಧಿ ಮತ್ತು ಜೌಗು ಇರುವಲ್ಲೆಲ್ಲಾ ಕಾಣಸಿಗುವ ಹಕ್ಕಿಗಳು. ಆದರೆ ಯಾರೂ ಇವನ್ನು ಸುಂದರವೆಂದಾಗಲೀ, ಕುರೂಪಿಯೆಂದಾಗಲೀ ವರ್ಣಿಸಿದ್ದು ನೋಡಿಲ್ಲ. ಈ ಸಾರ್ವತ್ರಿಕ ಔದಾಸೀನ್ಯಕ್ಕೆ ಮುಖ್ಯ ಕಾರಣ ಇದೇನೂ ಅಪರೂಪದ ಪಕ್ಷಿಯಲ್ಲದಿದ್ದರೂ ಯಾರಿಗೂ ಯಾವತ್ತೂ ವಿವರವಾಗಿ ನೋಡಲು ಸಿಕ್ಕುವುದಿಲ್ಲ. ಮನುಷ್ಯರು ಕಾಣಿಸುತ್ತಿದ್ದಂತೆಯೇ ಇವು ಪೊದೆಗಳೆಡೆಯಲ್ಲಿ ಅಡಗಿಕೊಳ್ಳುವುದರಿಂದ ಎಲ್ಲರೂ ಅಸ್ಪಷ್ಟವಾಗಿ ಕರಿಯ ಬಣ್ಣದ ಚಿಕ್ಕ ಕೋಳಿಗಾತ್ರದ ಹಕ್ಕಿ ಎಂದು ಮಾತ್ರ ತಿಳಿದಿರುತ್ತಾರೆ." (ಮಾಯಾಲೋಕ-೧, ಪುಟ-೩,೪, ಪ್ರ. ಪುಸ್ತಕ ಪ್ರಕಾಶನ, ಎರಡನೆ ಮುದ್ರಣ-೨೦೦೬, ಲೇ. ಕೆ.ಪಿ.ಪೂರ್ಣಚಂದ್ರ ತೇಜಸ್ವಿ)

ತೇಜಸ್ವಿ ಹೇಳುವ ಈ ಕಾರಣ ಒಂದು ನಿಟ್ಟಿನಲ್ಲಿ ನಿಜವೆನಿಸಿದರೂ ನೈಜ ಕಾರಣ ಬೇರೆಯೇ ಇದೆ ಎನಿಸುತ್ತದೆ. ಮನುಷ್ಯಕೇಂದ್ರಿತ ಯಾವ ಲೇಖಕನಿಗೂ ಈ ಪುಟ್ಟಗಾತ್ರದ ಹುಂಡುಕೋಳಿ ಮುಖ್ಯವಾಗಲು ಸಾಧ್ಯವಿಲ್ಲ. ಆದರೆ ಜೀವಕೇಂದ್ರಿತ ತೇಜಸ್ವಿ ಸಾಹಿತ್ಯ ಈ ಹುಂಡುಕೋಳಿ ಕ್ಷುಲ್ಲಕ ಎಂದು ಪರಿಗಣಿಸಲು ಸಾಧ್ಯವೇ ಇಲ್ಲ. ಯಾವುದು ಎಲ್ಲರ ಔದಾಸೀನ್ಯಕ್ಕೆ ಗುರಿಯಾಗುತ್ತದೆಯೋ ಅದು

ತೇಜಸ್ವಿ ಸಾಹಿತ್ಯದಲ್ಲಿ ಮುಖ್ಯ ಸ್ಥಾನ ಗಳಿಸುಸುವುದೇ ತೇಜಸ್ವಿ ಸಾಹಿತ್ಯದ ಶ್ರೇಷ್ಠತೆ. ಇಲ್ಲಿ ಯಾವುದೂ ಅಮುಖ್ಯವಲ್ಲ; ಯಕಶ್ಚಿತ್ ಅಲ್ಲ. ಜೊತೆಗೆ ತೇಜಸ್ವಿ ಪ್ರಕೃತಿಯನ್ನು ಗ್ರಹಿಸಿರುವ ಕ್ರಮ ಹೇಗಿತ್ತು ಎಂದರೆ ಯಾರಿಗೂ ಪೂರ್ಣವಾಗಿ ಕಾಣಿಸದ ಹುಂಡುಕೋಳಿ ತೇಜಸ್ವಿಗೆ ಅದರ ಎಲ್ಲ ವಿವರಗಳೊಂದಿಗೆ ದಕ್ಕುವಷ್ಟು ಸೂಕ್ಷ್ಮ ಹಾಗೂ ತಾದಾತ್ಮ ತೆಯಿಂದ ಕೂಡಿತ್ತು.

೪

ಜಗತ್ತಿನ ಚರಾಚರಗಳೆಲ್ಲ ಮನುಷ್ಯನ ಸುಖ ಸಂತೋಷಕ್ಕೆಂದೇ ಇರುವ ದೇವರ ಸೃಷ್ಟಿ ಎನ್ನುವ ಧೋರಣೆಗೆ ತೇಜಸ್ವಿ ಕಟ್ಟಾ ವಿರೋಧಿಗಳು. ಪ್ರತಿಯೊಂದೂ ಜೀವಿಗೂ ಭೂಮಿಯ ಮೇಲೆ ಬದುಕಲು ಅವರದೇ ಆದ ಹಕ್ಕಿದೆ. ಯಾವುದೇ ಜೀವಿಯನ್ನು ಅದರ ಮೂಲ ನೆಲೆಯಿಂದ ಬೇರ್ಪಡಿಸಿ ಅದರಿಂದ ತಾನು ಸಂತೋಷ ಪಡುವ ಪವೃತ್ತಿ ಮನುಷ್ಯನ ಮೇಲಿನ ಧೋರಣೆಯ ಅತ್ಯಂತಿಕ ಪರಿಣಾಮ. ಆದರೆ ತೇಜಸ್ವಿ ಯಾವುದೇ ಜೀವಿಗೆ ಬದುಕಲು ಹಕ್ಕಿದೆ ಎಂದು ಹೇಳುವುದಷ್ಟೇ ಅಲ್ಲ ಅದು ಅದರ ಮೂಲ ನೆಲೆಯಲ್ಲೇ ಬದುಕಲು ಹಕ್ಕುಳ್ಳದ್ದು ಎಂಬ ದೋರಣೆಯುಳ್ಳವರು. ಅವರ ಈ ಧೋರಣೆಯನ್ನು ಪರಿಸರವೂ ಕೂಡ ಸಮರ್ಥಿಸುತ್ತವೆ ಎನ್ನುವುದಕ್ಕೆ ಈ ವಿವರಣೆಯನ್ನು ನೋಡಿ. “ಕುರೂಪಿಸ ಬಾತಿನ ಮರಿಗಳು ಎಂಬಂತೆ ಅವು ಕುರೂಪಿಗಳಾಗಿದ್ದವು. ಅವುಗಳ ಮೈಮೇಲೆ ಬಾತುಗಳಿಗಿರುವ ಬಣ್ಣದ ಪುಕ್ಕಗಳೊಂದೂ ಇರಲಿಲ್ಲ. ತೆಳು ಚರ್ಮದ ಮೇಲೆ ರೋಮಗಳಿದ್ದು ಅವು ಪಕ್ಷಿ ಜಾತಿಗಿಂತ ಹೆಚ್ಚಾಗಿ ಇಲಿ ಹೆಗ್ಗಣಗಳ ಮೂಷಿಕ ವರ್ಗಕ್ಕೆ ಸೇರಿದಂತೆ ಕಾಣುತ್ತಿದ್ದವು.......ಕೆರೆ ಕಾಣುತ್ತಿದ್ದಂತೆಯೇ ಅವುಗಳಲ್ಲಾದ ಪರಿವರ್ತನೆ ಅಚ್ಚರಿ ಹುಟ್ಟಿಸುವಂತಿತ್ತು. ಕೆಲವೇ ದಿನಗಳಲ್ಲಿ ಆ ಕುರೂಪಿ ಮರಿಗಳ ಮೈಮೇಲಿದ್ದ ರೋಮಗಳೆಲ್ಲಾ ಉದುರಿ ಪುಕ್ಕಗಳು ಮೂಡಲು ಶುರುವಾದವು. ಕುತ್ತಿಗೆ ಮತ್ತು ರೆಕ್ಕೆ ಮೇಲೆ ನವಿಲಿನ ಬಣ್ಣದ ಪುಕ್ಕಗಳು ಮೂಡಿದವು. ಕರೆ ದಂಡೆಯ ಮೇಲೆ ಓಡಾಡುವ ಎಲ್ಲರೂ ಒಂದು ನಿಮಿಷವಾದರೂ ನಿಂತು ತೇಲಾಡುವ ಮೋಡಗಳಿಂತಿದ್ದ ಅವನ್ನು ನೋಡದೆ ಮುಂದಕ್ಕೆ ಹೋಗುತ್ತಿರಲಿಲ್ಲ. (ಮಾಯಾಲೋಕ-೧, ಪುಟ-೪೬, ಪ್ರ. ಪುಸ್ತಕ ಪ್ರಕಾಶನ, ಎರಡನೆ ಮುದ್ರಣ-೨೦೦೬, ಲೇ. ಕೆ.ಪಿ.ಪೂರ್ಣಚಂದ್ರ ತೇಜಸ್ವಿ)

ಇಲ್ಲಿ ಗಮನಿಸಬೇಕಾದ ಒಂದು ಮುಖ್ಯ ಅಂಶ ಎಂದರೆ ಮನುಷ್ಯನ ಬಂಧನದಲ್ಲಿದ್ದ ಬಾತಿನ ಮರಿಗಳು ತಮ್ಮ ಲವಲವಿಕೆಯನ್ನು ಕಳೆದುಕೊಂಡು ಕುರೂಪವಾಗಿದ್ದವು. ಆದರೆ ಅದೇ ಮರಿಗಳು ತಮ್ಮ ಮೂಲಸ್ಥಾನಕ್ಕೆ ಬಂದ ಕೂಡಲೇ ಅತ್ಯಂತ ಚಲನಶೀಲವಾಗಿದ್ದಲ್ಲದೆ ನೋಡುಗರ ಕಣ್ಣಲ್ಲಿ ಸೌಂದರ್ಯದ ಬುಗ್ಗೆಗಳಾಗಿ ತೇಲುವ ಮೋಡಗಳಾದವು. ಈ ಚಿತ್ರಣವನ್ನು ಕಂಡಾಗ ಪ್ರಕೃತಿಯ ಮಡಿಲಲ್ಲಿ ಜೀವಿಸುವ ಯಾವುದೇ ಪ್ರಾಣಿ ಪ್ರಕೃತಿಯನ್ನು ತೊರೆದು ನೆಮ್ಮದಿಯಿಂದ ಬದುಕಲಾರದು ಎಂಬುದು ವೇದ್ಯವಾಗುತ್ತದೆ. ಪ್ರಕೃತಿಯೇ ಅವುಗಳ ಚೈತನ್ಯದ ಕೇಂದ್ರ, ಜೀವಸೆಲೆ. ಎಂಥ ಕಾಡು ಪ್ರಾಣಿಯೂ ಮನುಷ್ಯನ ನಡುವೆ ನೆಮ್ಮದಿಯಿಂದ ಬದುಕುವುದಿಲ್ಲ. ಬದುಕಿದರೂ ಅದು ಕೇವಲ ಜೀವ ಓಡಿದುಕೊಂಡು ಮಾತ್ರ. ಯಾವುದೇ ಜೀವಿ ಅದರ ಮೂಲ ನೆಲೆಯಲ್ಲಿಯೇ ಬದುಕಲು ಹಕ್ಕುಳ್ಳದ್ದು ಮತ್ತು ಅದೇ ಅದರ ಸಂತೋಷದ ತಾಣ ಎಂಬ ಧೋರಣೆಗೆ ಇಲ್ಲಿ ಸಾಕ್ಷ್ಯ ಸಿಗುತ್ತದೆ. ಮನುಷ್ಯನೊಟ್ಟಿಗೆ ಇದ್ದ ಬಾತು ಮರಿಗಳು ಸೊರಗಿ ಕರೂಪವಾಗಿದ್ದವು. ಆದರೆ ತಮ್ಮ ಮೂಲ ಸ್ಥಾನಕ್ಕೆ ಬಂದೊಡನೆ ಪ್ರಕೃತಿ ಅವುಗಳಲ್ಲಿ ಚೈತನ್ಯವನ್ನು ತುಂಬಿತು. ಅವುಗಳ ಸೌಂದರ್ಯವನ್ನು ಮರಳಿ ನೀಡಿತು. ಮನುಷ್ಯ ಬಂಧನದಲ್ಲಿ ಸಿಲುಕಿ ನರಕಯಾತನೆ ಅನುಭವಿಸುತ್ತಿರುವ ಕಾಡು ಪ್ರಾಣಿ ಮತ್ತು

ಪಕ್ಷಿಗಳ ಸ್ಥಿತಿ ಈ ಸಂದರ್ಭದಲ್ಲಿ ನಮಗೆ ನೆನಪಿಗೆ ಬಾರದೇ ಇರದು. ಇದನ್ನು ತೇಜಸ್ವಿ ಸಾಹಿತ್ಯ ಸೂಕ್ಷ್ಮವಾಗಿ ಪ್ರತಿಭಟಿಸುತ್ತಿರುವುದನ್ನು ಗಮನಿಸಬಹುದು.

೫

ಮಾಯಾಲೋಕದಲ್ಲಿ ಪ್ರಾಣಿ ಮತ್ತು ಪಕ್ಷಿ ಪ್ರಪಂಚದ ವಿವರಗಳು ಸಾಕಷ್ಟಿವೆ. ಕಾದಂಬರಿಯಲ್ಲಿ ಮುಖ್ಯ ಭೂಮಿಕೆಯಾಗಿ ಕಾಣಿಸಿಕೊಳ್ಳುವ ಜೌಗು ಹಲವು ಹಕ್ಕಿಗಳ ತಾಣವೂ ಆಗಿರುತ್ತದೆ. ತೇಜಸ್ವಿ ಈ ಹಕ್ಕಿಗಳನ್ನು ಕೇವಲ ಸಾಂದರ್ಭಿಕವಾಗಿ ವಿವರಿಸುವುದಿಲ್ಲ. ಅಲ್ಲಿನ ಹಕ್ಕಿಗಳ ಜೀವನ ಕ್ರಮವನ್ನೂ ವಿವರಿಸುವುದನ್ನು ನೋಡಿದರೆ ಅವರ ಹಕ್ಕಿ ವ್ಯಾಮೋಹ ಇಲ್ಲಿ ಎಚ್ಚರಗೊಂಡಿದೆ ಎನಿಸದಿರದು. ಕಾಡುಕೋಳಿ, ಚಿಟ್ಟುಕೋಳಿ, ಕೋರೆಹಕ್ಕಿ, ಹುಂಡುಕೋಳಿ, ಕೊಕ್ಕರೆ, ಕಾಡುಕೋಳಿ, ಬೆಳ್ಳಕ್ಕಿ, ನೀರುಕಾಗೆ, ಮುಂತಾದ ಹಕ್ಕಿಗಳು ಇಲ್ಲಿ ಬರುತ್ತವೆ, ಈ ಹಕ್ಕಿಗಳು ಗದ್ದೆಯಲ್ಲಿ ಚೆಲ್ಲಿದ ಭತ್ತಗಳನ್ನು ತಿಂದು ಹಾಕುತ್ತವೆ ಎಂಬ ಕಾರಣಕ್ಕೆ ಹಕ್ಕಿಪಿಕ್ಕಿಗಳಿಗೆ ಹೇಳಿ ಈ ಹಕ್ಕಿಗಳನ್ನು ಬೇಟೆಯಾಡಿಸಿಬಿಡಲಾಗುತ್ತದೆ. ತದನಂತರ ಮತ್ತೆ ಆ ಜೌಗಿನಲ್ಲಿ ಹಕ್ಕಿಗಳು ಹೆಚ್ಚಬಹುದೆಂಬ ನಿರೂಕಪರ ನಂಬಿಕೆ ಹುಸಿಯಾಗುತ್ತದೆ. ಯಾಕಂದ್ರೆ ಜೌಗಿನಲ್ಲಿ ಒಂದು ಹಕ್ಕಿಯೂ ಉಳಿಯದ ಹಾಗೆ ಹಕ್ಕಿಪಿಕ್ಕಿಗಳು ಬೇಟೆಯಲ್ಲಿನ ತಮ್ಮ ಪ್ರಾವೀಣ್ಯತೆ ಬಳಸಿ ಬೇಟೆಯಾಡಿರುತ್ತಾರೆ. ಹೀಗಾಗಿ ಜೌಗಿನಲ್ಲಿ ಮುಂದೆ ಯಾವ ಹಕ್ಕಿಗಳ ಸುಳಿವೂ ಕಾಣಸಿಗುವುದಿಲ್ಲ

ನಿರೂಪಕನ ತೋಟದ ಪಕ್ಕದಲ್ಲೇ ಬರುವ ಒಂದು ಜೌಗು ಪ್ರದೇಶ ಕಾದಂಬರಿಯಲ್ಲಿ ಕೇಂದ್ರ ಸ್ಥಾನದಂತೆ ಕಾಣುತ್ತದೆ. ಮಾಯಾಲೋಕದುದ್ದಕ್ಕೂ ಸಂಭವಿಸುವ ಹಲವು ಘಟನೆಗಳಿಗೆ ಈ ಜೌಗು ಪ್ರದೇಶವೇ ವೇದಿಕೆಯಾಗಿ, ಅಲ್ಲದೆ ಮುಂದೆ ನಡೆಯುವ ಘಟನೆಗಳಿಗೆ ಕಾರಣವಾಗಿರುವುದನ್ನು ಗಮನಿಸಿದರೆ ಜೌಗು ಕಾದಂಬರಿಯಲ್ಲಿ ವಿಶೇಷ ಮಹತ್ವವನ್ನು ಪಡೆಯುತ್ತದೆ. ಹೀಗಾಗಿ ಇಲ್ಲಿ ಜೌಗು ಕೇವಲ ಒಂದು ಭೌಗೋಳಿಕ ಪ್ರದೇಶವೋ ಅಥವಾ ಒಂದು ಮಹತ್ವದ ಪ್ರತಿಮೆಯೋ ಎಂಬ ಅನುಮಾನವೂ ಮೂಡುತ್ತದೆ. ಜೌಗು ಎಂಬ ಪ್ರದೇಶದ ಭೌಗೋಳಿಕ ಲಕ್ಷಣವನ್ನು ನೋಡುವುದಾದರೆ ಅದು ಸದಾ ನೀರಿನಿಂದ ಕೂಡಿರುತ್ತದೆ. ಈ ಕಾರಣದಿಂದಲೇ ಬೇಸಿಗೆಯಲ್ಲೂ ಹಸಿರಿನಿಂದ ತುಂಬಿರುತ್ತದೆ. ಸುತ್ತ ಮುತ್ತಲ ಊರಿನ ದನ ಕರುಗಳಿಗೆ ವರ್ಷಪೂರ್ತಿ ಮೇವನ್ನೂ, ಕುಡಿಯುವ ನೀರನ್ನು ಒದಗಿಸುತ್ತದೆ. ಇಷ್ಟೇ ಅಲ್ಲದೆ ತನ್ನೊಡಲಲ್ಲಿ ಸಾವಿರಾರು ಜಲಚರ ಪ್ರಾಣಿಗಳಿಗೆ ಸ್ಥಾನ ಒದಗಿಸಿರುತ್ತದೆ. ಹೀಗೆ ಸದಾ ಕ್ರಿಯಾಶೀಲವಾಗಿರುವ ಜೌಗು ಒಂದು ಪ್ರತಿಮೆಯಾದಾಗ ಹಲವು ಅರ್ಥಗಳನ್ನು ಸ್ಫುರಿಸುತ್ತದೆ. ಮಾಯಾಲೋಕದ ವಸ್ತುವೂ ಸದಾ ಕ್ರಿಯಾಶೀಲ ಎಂಬ ಅರ್ಥವನ್ನು ಇದು ಧ್ವನಿಸುತ್ತದೆ. ಹೀಗಾಗಿ ಲೇಖಕರು ಜೌಗು ಪ್ರದೇಶವನ್ನು ಉದ್ದೇಶಪೂರ್ವಕವಾಗಿಯೆ ಕಾದಂಬರಿಯಲ್ಲಿ ಪ್ರಮುಖವಾಗಿ ಬಳಸಿಕೊಂಡಿರುವ ಶಂಕೆಯಿದೆ. ಈ ನಿಟ್ಟಿನಲ್ಲೂ 'ಜೌಗ'ನ್ನು ನೋಡುವ ಅಗತ್ಯವಿದೆ.

ಇದೇ ಜೌಗಿನಲ್ಲಿ ಕಾದಂಬರಿ ಮುಂದುವರಿಯುತ್ತಾ ಹೋದಂತೆ ಇನ್ನೂ ಮಹತ್ತರ ಬದಲಾವಣೆಯಾಗುತ್ತವೆ. ಹಳ್ಳದ ಬಸವನ ಗುಂಡಿ ಮತ್ತು ಗೌರಿ ಗುಂಡಿಗಳಲ್ಲಿ ಯಾರೋ ಕಾರೇಕಾಯಿ ಜಜ್ಜಿ ಕದಡಿ ಕದ್ದು ಮೀನು ಹಿಡಿಯುತ್ತಾರೆ. ಇದೇ ನೆಪವನ್ನು ಮುಂದಿಟ್ಟುಕೊಂಡು

ಊರಳ್ಳಿಯವರಿಗೆ ಚೆನ್ನಾಗಿ ಬುದ್ಧಿ ಕಲಿಸಬೇಕೆಂದು ಇಕ್ಬಾಲ್‌ಸಾಬಿ ಸಂಚುರೂಪಿಸಿ ಊರಳ್ಳಿಯವರನ್ನು ಪಂಚಾಯ್ತಿಗೆ ಹಾಕಿಸುತ್ತಾನೆ. ಆದರೆ ಅಲ್ಲಿ ಯಾವುದೂ ತೀರ್ಮಾನವಾಗದೆ ಹೊಡೆದಾಟ ಆರಂಭವಾಗುವ ಹಂತಕ್ಕೆ ತಲುಪಿ ಅಂತ್ಯವಾಗುತ್ತದೆ. ಅಣ್ಣಪ್ಪಣ್ಣ ಮತ್ತು ಜಗ್ಗನ ಮೆಣಸಿನ ಮಡಿ ಇರುವುದು ಈ ಜೌಗಿನಲ್ಲೇ. ಮೆಣಸಿನ ಮಡಿಗೆ ನೀರು ಹಾಯಿಸಲು ಅಣ್ಣಪ್ಪಣ್ಣ ಹರಿಯುವ ಹಳ್ಳದ ನೀರನ್ನು ತನ್ನ ಮೆಣಸಿನ ಮಡಿಗೆ ತಿರುಗಿಸುತ್ತಾನೆ. ಹಳ್ಳದಲ್ಲಿ ಮಕ್ಕಿಗದ್ದೆ ಕುಡಿಯುವ ನೀರೊದಗಿಸಲೆಂದು ಹಾಕಿಸಿದ್ದ ಮೋಟಾರ್ ಪಂಪು ನೀರಿಲ್ಲದೆ ಓಡಿ ಸುಟ್ಟು ಹೋಗುತ್ತದೆ. ಈ ಕಾರಣದಿಂದಲಾದರೂ ಊರಳ್ಳಿ ಬಡ್ಡಿಮಕ್ಕಳ ತಲೆ ಒಡೆಯಬೇಕೆಂದು ಇಕ್ಬಾಲ್ ಊರವರನ್ನೆಲ್ಲ ಗುಂಪು ಕಟ್ಟಿಕೊಂಡು ಬಂದು ಅಣ್ಣಪ್ಪಣ್ಣನ ಮೇಲೆ ಜಗಳಕ್ಕೆ ನಿಲ್ಲುತ್ತಾನೆ. ಕೊನೆಗೆ ಅಲ್ಲಿ ತನ್ನ ಬೇಳೆ ಏನೂ ಬೇಯುವುದಿಲ್ಲ ಎಂದು ತಿಳಿದು ಕಾನೂನು ರೀತ್ಯ ಊರಳ್ಳಿ ಸೂಳೇಮಕ್ಕಳಿಗೆ ಬುದ್ಧಿ ಕಲಿಸಬೇಕೆಂದು ತಹಸೀಲ್ದಾರ್‌ಗೆ ದೂರು ನೀಡುತ್ತಾನೆ. ಆದರೆ ಯಾವುದೂ ಪ್ರಯೋಜನವಾಗುವುದಿಲ್ಲ. ಊರಳ್ಳಿ ಮತ್ತು ಮಕ್ಕಿಗದ್ದೆ ಜನರ ನಡುವೆ ನಡೆಯುವ ಜಗಳ, ಅಣ್ಣಪ್ಪಣ್ಣನ ಮೆಣಸಿನ ಮಡಿ, ಮಕ್ಕಿಗದ್ದೆಗೆ ನೀರೊದಗಿಸುವ ಹಳ್ಳ ಇವೆಲ್ಲ ಈ ಜೌಗಿನಲ್ಲೇ ಬರುತ್ತವೆ. ಈ ಅಂಶಗಳೇ ಕಾದಂಬರಿಯ ಚಲನಶೀಲತೆಗೆ ಕಾರಣವಾಗುವುದಷ್ಟೇ ಅಲ್ಲ ಕಾದಂಬರಿಯ ಸ್ಥಿತ್ಯಂತರಗಳಿಗೂ ಕಾರಣವಾಗುತ್ತವೆ.

ಜೌಗು ಎಂದರೆ ಎಮ್ಮೆಗಳಿಗಂತೂ ಪ್ರಾಣ. ಜೌಗಿಗೆ ಮೇಯಲು ಬಿಟ್ಟರೆ ಮೇಯುವುದನ್ನು ಬಿಟ್ಟು ಅಲ್ಲಿನ ನೀರಿನಲ್ಲಿ ಬಿದ್ದು ಕೆಸರಿನಲ್ಲಿ ಉರುಳಾಡುತ್ತವೆ. ಅಲ್ಲಿಂದ ಅವನ್ನು ಎಳೆದು ತರುವುದೇ ಒಂದು ಸಾಹಸ. ಕೆಸರು ಮೆತ್ತಿಕೊಂಡ ಎಮ್ಮೆಗಳನ್ನು ಅಲ್ಲೇ ಗುಂಡಿಯ ನೀರಿನಲ್ಲಿ ತೊಳೆದು ಮತ್ತೆ ಮೇಯಲು ಬಿಡುವುದು. ಹೀಗೆ ಬಾಲ್ಯದ ಸವಿ ನೆನಪುಗಳನ್ನು ಈ ಜೌಗು ನೆನಪಿಸುತ್ತದೆ. ಒಮ್ಮೆ ಜೌಗಿನಲ್ಲಿ ಯಾವುದೋ ಸತ್ತ ಪ್ರಾಣಿಗೆ ನೂರಾರು ಸಂಖ್ಯೆಯಲ್ಲಿ ಏಡಿಗಳು ಮುತ್ತಿಕೊಂಡಿರುವುದನ್ನು ಕಂಡಾಗ ಏಡಿ ಹಿಡಿದು ತಿಂದ ಅನುಭವವಿರುವವರಿಗಂತೂ ಅದು ರಸಗವಳವೇ ಸರಿ. ಇಂಥ ಹಲವು ನೆನಪುಗಳ ಬುತ್ತಿಯನ್ನು ಮಾಯಾಲೋಕ ತೆರೆಸುತ್ತದೆ. ಈ ಮುಖಾಮುಖಿಯನ್ನೇ ನಾನು ಓದುಗನ ನೆಲೆಯ ವಿಮರ್ಶೆ ಎಂದು ಪರಿಭಾವಿಸಿರುವುದು.

ಕಾದಂಬರಿಯ ಕೊನೆಯಲ್ಲಿ ಪ್ರಳಯಕಾರಿ ಮಳೆಯಾಗಿ ಇಡೀ ಜೌಗು ಪ್ರದೇಶವೇ 'ಲಕ್ಷಾಂತರ ಲೋಡು ಮಣ್ಣಿ'ನಿಂದ ಮುಚ್ಚಿ ಹೋಗುತ್ತದೆ. ಒಟ್ಟಾರೆಯಾಗಿ ಕಾದಂಬರಿಯ ಎಲ್ಲ ಘಟನೆಗಳಿಗೂ ಜೌಗಿಗೂ ನೇರ ಅಥವಾ ಪರೋಕ್ಷ ಸಂಬಂಧ ಏರ್ಪಟ್ಟಿದೆ ಅಥವಾ ಲೇಖಕರು ಏರ್ಪಡಿಸಿದ್ದಾರೆ ಎನ್ನುವಲ್ಲಿ ಜೌಗಿಗೆ ಮಹತ್ವವಿದೆ.

ಜೌಗು ಎನ್ನುವುದನ್ನು ಅನುಭವದ ಕೇಂದ್ರವಾಗಿ ನೋಡಿದರೆ ನನಗೆ ನನ್ನ ಬಾಲ್ಯದ ಹಲವು ಅನುಭವಗಳು ನುಗ್ಗಿ ಬರುತ್ತವೆ. ಇದೇ ಅನುಭವದ ಯಾರಿಗಾದರೂ ಜೌಗು ಎನ್ನುವುದು ಹೊಸ ಅನುಭವ ಲೋಕವನ್ನೇ ತೆರೆದರೆ ಆಶ್ಚರ್ಯವಿಲ್ಲ. ಗ್ರಾಮೀಣ ಭಾಗಗಳಲ್ಲಿ ಹುಟ್ಟಿ ಬೆಳೆದವರಿಗೆ ಜೌಗು ಎನ್ನುವ ಕೇಂದ್ರ ನೀಡುವ ಅನುಭವವೇ ಬೇರೆ. ಜೌಗು ಎಂದರೆ ಸಾಮಾನ್ಯವಾಗಿ ಸದಾ ತೇವದಿಂದ ಕೂಡಿದ್ದು ಕೆಸರಿನಿಂದ ತುಂಬಿರುವ ಒಂದು ವಿಸ್ತಾರವಾದ ಪ್ರದೇಶ. ನೀರು ಹರಿದು ಹರಿದು ಜೊಂಡು ಎಂಬ ಒಂದು ರೀತಿಯ ನೀರಿನ ಕಳೆ ಬೆಳೆದಿರುತ್ತದೆ. ಇದಕ್ಕೆ ನೀರನ್ನು ಸದಾ ಕಾಲದಲ್ಲೂ ಹಿಡಿದಿಡುವ

ಶಕ್ತಿಯಿರುತ್ತದೆ. ಹೀಗಾಗಿ ಬಿರುಬೇಸಿಗೆಯಲ್ಲೂ ಜೌಗು ಪ್ರದೇಶದಲ್ಲಿ ನೀರಿರುತ್ತದೆ. ಇಲ್ಲಿರುವ ಸಣ್ಣ ಗುಂಡಿಗಳಲ್ಲಿ ಮೀನು, ಏಡಿಗಳು ತುಂಬಿರುತ್ತವೆ. ಏಕೆಂದರೆ ಮಳೆಗಾಲದಲ್ಲಿ ಹಳ್ಳ ಹರಿಯುವಾಗ ಹರಿಯುವ ನೀರಿಗೆದುರಾಗಿ ಈಜುವ ಮೀನುಗಳು ಹಳ್ಳದಲ್ಲಿ ನೀರು ಕಡಿಮೆಯಾದಂತೆ ಮುಂದಕ್ಕೆ ಈಜಲಾಗದೆ ಗುಂಡಿಗಳಲ್ಲಿ ನಿಂತಿರುವ ನೀರಿನಲಿ ಉಳಿದುಬಿಡುತ್ತವೆ. ಏಡಿಗಳು ಬಿಲ ತೋಡಿಕೊಂಡಿರುತ್ತವೆ. ಇಂಥ ಗುಂಡಿಗಳಲ್ಲಿ ಮೀನು, ಏಡಿಗಳನ್ನು ಹಿಡಿಯುವದೇ ಒಂದು ರೋಮಾಂಚಕಾರಿ ಅನುಭವ. ಮೀನು, ಏಡಿಸಾರು ನಾಲಿಗೆಗೆ ರುಚಿಕಟ್ಟಾಗಿದ್ದರೂ ಮೀನು ಹಿಡಿಯುವ ಕ್ರಿಯೆಯೇ ಹೆಚ್ಚು ಆನಂದ ನೀಡುತ್ತದೆ. ಇನ್ನು ನಾವೇ ಹಿಡಿದು ತಿನ್ನುವುದು ವಿಶೇಷ ರುಚಿ ನೀಡುತ್ತದೆ. ಈ ಅನುಭವಗಳು ಇರುವವರಿಗೆ ಜೌಗು ಬಾಲ್ಯದ ಈ ನೆನಪುಗಳನ್ನು ನೆನಪಿಸದೆ ಬಿಡುವುದಿಲ್ಲ.

ಮೀನು ಹಿಡಿಯುವುದನ್ನು ಒಂದು ಹವ್ಯಾಸವಾಗಿಸಿಕೊಂಡಿದ್ದ ತೇಜಸ್ವಿಗೆ ಗಾಳ ಹಾಕಿ ಮೀನು ಹಿಡಿಯುವುದೆಂದರೆ ಬಹಳ ಮೋಜು. ಮೀನಿಗೆ ಗಾಳ ಹಾಕಿ ಕುಳಿತರೆ ಹಲವು ಗಂಟೆಗಳೇ ಕಳೆದರೂ ಮೇಲೇಳುತ್ತಿರಲಿಲ್ಲ. ಮೀನು ಹಿಡಿಯುವುದು ಹೆಚ್ಚು ತಾಳ್ಮೆಯನ್ನು ಬೇಡುವ ಕೆಲಸ, ಮೀನು ಹಿಡಿಯುವವನು ಬಹಳ ಜಾಣ್ಮೆಯಿಂದಿರಬೇಕು, ಮೀನಿನ ಚಲನವಲನಗಳನ್ನು ಅರಿತವನಾಗಿರಬೇಕು, ಅವುಗಳ ನಡವಳಿಕೆಗಳನ್ನು ಗ್ರಹಿಸಬಲ್ಲವರಾಗಿರಬೇಕು. ಆಗ ಮಾತ್ರ ಗಾಳಕ್ಕೆ ಮೀನು ಬೀಳಿಸಲು ಸಾಧ್ಯ. ಇಲ್ಲವಾದರೆ ದಿನಗಟ್ಟಲೆ ಕಾದರೂ ಒಂದು ಮೀನನ್ನೂ ಹಿಡಿಯಲು ಸಾಧವಿಲ್ಲ. ಈ ಎಲ್ಲದರ ಅರಿವಿದ್ದ ತೇಜಸ್ವಿ ಮೀನುಗಳ ಬಗ್ಗೆ ಸಾಕಷ್ಟು ತಿಳಿದುಕೊಂಡಿದ್ದರು. ಮೀನಿನ ಹೆಜ್ಜೆ ಗುರುತುಗಳನ್ನು ಕಾಣಬಲ್ಲವರಾಗಿದ್ದರು. ಮೀನುಗಳ ಹಲವು ಪ್ರಭೇದಗಳನ್ನು ತೇಜಸ್ವಿ ಹೆಸರಿಸುತ್ತಾರೆ. ಬಾಳೆಮೀನು, ಗೆಂಡೆಮೀನು, ಅವುಲುಮೀನು ಮುಂತಾದವು. ಇವಕ್ಕೆಲ್ಲ ವೈಜ್ಞಾನಿಕವಾಗಿ ಏನೇ ಹೆಸರಿದ್ದರೂ ಕಾದಂಬರಿಯಲ್ಲಿ ತೇಜಸ್ವಿ ಮೀನುಗಳನ್ನು ಸ್ಥಳೀಯ ಹೆಸರುಗಳಿಂದಲೇ ಗುರ್ತಿಸಿದ್ದಾರೆ.

೬

ಕಾರೇಕಾಯಿ ಜಜ್ಜಿ ಕದಡಿ ಮೀನು ಹಿಡಿಯುವುದನ್ನು ತೇಜಸ್ವಿ ವಿವರಿಸಿದ್ದಾರೆ. ಮೀನು ಹಿಡಿಯವ ಇಂಥದೇ ಇನ್ನೂ ಹಲವು ವಿಧಾನಗಳನ್ನು ಹಳ್ಳಿ ಜನರು ಮೀನು ಹಿಡಿಯಲು ಬಳಸುವುದನ್ನು ನೋಡಿದ್ದೇನೆ. ಕತ್ತಾಳೆಪಟ್ಟೆಗಳನ್ನು ಕಡಿದು ಮೀನಿರುವ ಗುಂಡಿಗಳಿಗೆ ಹಾಕಿಬಿಡುತ್ತಾರೆ. ಕತ್ತಾಳೆಪಟ್ಟೆಗಳು ನೀರಿನಲ್ಲಿ ನೆನೆದುಕೊಂಡು ಒಂದು ದಿನದಲ್ಲಿ ರಸವನ್ನು ಬಿಡುತ್ತವೆ. ಕತ್ತಾಳೆರಸ ಹೊರಬಂದ ಕೂಡಲೇ ಮೀನುಗಳು ಅರೆಪ್ರಜ್ಞಾವಸ್ಥೆಗೆ ಬಂದು ಮೇಲೆ ತೇಲಾಡುತ್ತವೆ. ಆಗ ಅವುಗಳನ್ನು ಕೈಯಿಂದಲೇ ಅತಿ ಸುಲಭವಾಗಿ ಹಿಡಿದುಕೊಳ್ಳುತ್ತಾರೆ. ಮೀನು ಹಿಡಿಯಲು ಇದೊಂದು ಸುಲಭ ವಿಧಾನ. ಇದೇ ರೀತಿ ಮುಳ್ಳು ತುಂಬಿದ ಕಳ್ಳೆಗಳನ್ನು ಮೀನಿರುವ ಗುಂಡಿಯಲ್ಲಿ ಎಳೆದಾಡಿದರೆ ಮೀನುಗಳಿಗೆ ಮುಳ್ಳು ಚುಚ್ಚಿಕೊಂಡು ಇಲ್ಲವೆ ಗಾಯಗೊಂಡು ಮೇಲೆ ಬಂದಾಗ ಮೀನು ಹಿಡಿಯುವುದು, ಚಿಕ್ಕ ಚಿಕ್ಕ ಗುಂಡಿಗಳಾದರೆ ನೀರನ್ನೆಲ್ಲಾ ಕದಡಿ ಬಗ್ಗಡ ಮಾಡಲಾಗುತ್ತೆ. ಆ ಬಗ್ಗಡದ ನೀರನ್ನು ಕುಡಿದು ಮೀನುಗಳೆಲ್ಲ ಮೇಲೆ ಬರುತ್ತವೆ. ಅಲ್ಲದೆ ನೀರಿಗೆ ಪಾರದರ್ಶಕತೆಯೂ ಹೋಗುವುದರಿಂದ ಅಪಾಯ ಯಾವ ಕಡೆಯಿಂದ ಬರುತ್ತದೆ ಎಂದು ಮೀನುಗಳಿಗೆ ಗ್ರಹಿಸಲು ಸಾಧ್ಯವಾಗುವುದಿಲ್ಲ. ಹೀಗಾಗಿ ಅವು ನೀರಿನ ಮೇಲ್ಮೈಯಲ್ಲಿ ಬಾಯಿ ಬಾಯಿ ಬಿಡುತ್ತಾ ನಿಧಾನವಾಗಿ ಚಲಿಸುತ್ತವೆ. ಆಗ ಅವನ್ನು ಸುಲಭವಾಗಿ ಹಿಡಿಯಬಹುದು. ಈ ರೀತಿ ಸುಲಭವಾಗಿ ಮೀನು ಹಿಡಿಯಲು

ಗ್ರಾಮೀಣ ಪ್ರದೇಶದ ಜನರು ಹಲವು ವಿಧಾನಗಳನ್ನು ಅನುಸರಿಸುತ್ತಾರೆ. ಮಾಯಾಲೋಕ ಇಂಥ ಕೆಲವು ದೇಸಿ ವಿಧಾನಗಳನ್ನು ವಿವರಿಸುವುದರಿಂದ ನಾನು ಕಂಡ ಒಂದಷ್ಟು ವಿಧಾನಗಳನ್ನು ಇಲ್ಲಿ ದಾಖಲಿಸಿದ್ದೇನೆ.

ಹರಿಯುವ ನೀರಿನಲ್ಲಿ ಹತ್ತುಮೀನುಗಳನ್ನು ಹಿಡಿಯಲು ಬೇರೆಯದೇ ವಿಧಾನಗಳನ್ನು ಜನ ಅನುಸರಿಸುತ್ತಾರೆ. ಹರಿಯುವ ನೀರು ಸ್ವಲ್ಪ ತಗ್ಗಾದ ಪ್ರದೇಶದಲ್ಲಿ ಸಣ್ಣದಾಗಿ ಧುಮುಕುತ್ತದೆ. ಹತ್ತು ಮೀನುಗಳು ನೀರಿನ ಹರಿವಿಗೆ ಎದುರಾಗಿ ಈಜುತ್ತ ನೀರು ಧುಮುಕುವ ಸ್ಥಳಗಳಲ್ಲಿ ಮೇಲಕ್ಕೆ ಜಿಗಿಯುತ್ತವೆ. ಈ ರೀತಿ ಜಿಗಿಯುವ ಮೀನುಗಳನ್ನು ಹಿಡಿಯುತ್ತಾರೆ. ಮತ್ತೊಂದು ವಿಧಾನದಲ್ಲಿ ಹರಿಯುವ ನೀರಿಗೆ ಒಂದೆಡೆ ಕಟ್ಟೆ ಕಟ್ಟಿ ನೀರು ಹರಿಯಲು ಒಂದೇ ಕಡೆ ಸ್ವಲ್ಪ ಜಾಗ ಬಿಡಲಾಗುತ್ತೆ. ಆ ಜಾಗಕ್ಕೆ ಕೊಡುಮೆ (ಹತ್ತು ಮೀನುಗಳನ್ನು ಹಿಡಿಯಲು ಗ್ರಾಮೀಣ ಪ್ರದೇಶದಲ್ಲಿ ಜನ ಬಳಸುವ ಒಂದು ರೀತಿಯ ದುಂಡಾಕಾರದ ಪರಿಕರ) ಗಳನ್ನು ನೀರಿನಲ್ಲಿ ಮುಳುಗಿಸಿ ಕಟ್ಟುತ್ತಾರೆ. ಮೇಲತ್ತುವ ಮೀನುಗಳು ಹರಿವ ನೀರಿಗೆ ಎದುರಾಗಿ ಈಜುತ್ತಾ ಬಂದಾಗ ಇರುವ ಸ್ವಲ್ಪ ಜಾಗದಲ್ಲೇ ಒಳಗೆ ತೂರುತ್ತವೆ. ಕೊಡುಮೆಯ ರಚನೆ ಹೇಗಿರುತ್ತದೆ ಎಂದರೆ ಒಳಗೆ ಹೋಗಲು ಮಾತ್ರ ಜಾಗವಿರುತ್ತದೆ. ಆದರೆ ಹೊರಬರಲು ಸಾಧ್ಯವಿಲ್ಲ. ರಾತ್ರಿವೇಳೆ ಕೊಡುಮೆಗಳನ್ನು ಕಟ್ಟಬಂದರೆ ಬೆಳಿಗ್ಗೆ ವೇಳೆಗೆ ಮೀನು, ಏಡಿ, ಕಪ್ಪೆ ಅಷ್ಟೇ ಏಕೆ ಹಾವು–ಹೀಗೆ ನಾನಾ ತರಹದ ಜಲಚರಗಳು ಅದರಲ್ಲಿ ಬಂಧಿಯಾಗುತ್ತವೆ. ಇವೆಲ್ಲ ಗ್ರಾಮೀಣ ಜನತೆ ಮೀನುಗಳನ್ನು ಹಿಡಿಯಲು ಕಂಡುಕೊಂಡಿರುವ ಸುಲಭ ತಂತ್ರೋಪಾಯಗಳು. ಮಾಯಾಲೋಕ ಇಂಥ ಯಾವುದೋ ಒಂದು ಅನುಭವವನ್ನು ದಾಖಲಿಸುತ್ತ ಅಂಥದೇ ನೂರಾರು ಅನುಭವಗಳಿಗೆ ನಮ್ಮನ್ನು ಮುಖಾಮುಖಿಯಾಗಿಸುತ್ತದೆ. ಆದರೆ ಅಂಥ ಅನುಭವಗಳು ದಾಖಲಾದವರಿಗೆ ಮಾತ್ರ ಈ ಮುಖಾಮುಖಿ ಸಾಧ್ಯ.

೭

ದಟ್ಟ ಕಾಡಿನ ನಡುವೆ ಇರುವ 'ಕೊಚ್ಚುಮಕ್ಕಿ' ಎಂಬ ಗ್ರಾಮದ ವಿಚಿತ್ರ ಬದುಕಿನ ಚಿತ್ರಣವೊಂದು ಕಾದಂಬರಿಯಲ್ಲಿ ಬರುತ್ತದೆ. ಈ ಗ್ರಾಮದ ಜನತೆ ಪ್ರತಿದಿನ ಅನುಭವಿಸುವ ಪಡಿಪಾಟಲು ನೋಡಿದರೆ ಮೈ ಜುಮ್ಮೆನಿಸುತ್ತದೆ

"ಕೊಚ್ಚುಮಕ್ಕಿ ಆ ದಟ್ಟ ಕುರುಚಲು ಕಾಡಿನ ನಡುವೆ ಇದ್ದ ಆರೇಳು ಮನೆಗಳ ಕುಗ್ರಾಮ. ಅಲ್ಲಿಗೆ ಹೋಗಬೇಕಾದರೆ ಕೈಯ್ಯಲ್ಲಿ ಕತ್ತಿ ಹಿಡಿದು ಅಡ್ಡ ಬೆಳೆದಿರುವ ಕುರುಚಲು ಕಾಡನ್ನೆಲ್ಲ ಪ್ರತಿಸಾರಿಯೂ ಕೊಚ್ಚಿ ದಾರಿ ಮಾಡಿಕೊಂಡು ಹೋಗಬೇಕಾಗುವುದರಿಂದ ಆ ಊರಿಗೆ ಕೊಚ್ಚುಮಕ್ಕಿ ಎಂಬ ಹೆಸರು ಬಂತೆಂದು ಎಲ್ಲರೂ ಹೇಳುತ್ತಾರೆ. ಕಾರೆ, ಲಂಟಾನ, ಉರುಚಟ್ಲೆ ಕೆಂಜಿಗೆ, ತುರುಚಿ, ನಸುಗುನ್ನಿ ಮೊದಲಾದ ಭಯಂಕರ ಆಕ್ರಮಣಕಾರಿ ಹಳುವಿನ ಗಿಡಗಳೇ ಅಲ್ಲಿ ತುಂಬಿ ತುಳುಕುತ್ತಿದ್ದವು. ಕೊಚ್ಚಿ ದಾರಿ ಮಾಡಿಕೊಳ್ಳುವಾಗಲೆಲ್ಲ ಇವು ಮೈ ಕೈಗೆಲ್ಲ ತಾಗಿ ತಾಳಲಾರದ ತುರಿಕೆ ಶುರುವಾಗುತ್ತಿತ್ತು. ತುರಿಕೆ ತಾಳಲಾರದೆ ಕತ್ತಿಯಲ್ಲೆ ರಕ್ತ ಒಸರುವವರೆಗೆ ಮೈ ಕೆರೆದುಕೊಂಡು ಊರು ತಲುಪಿದ ನಂತರ ಗಾಯಗಳಿಗೆ ತೆಂಗಿನೆಣ್ಣೆ ಬಳಿದು ತುರಿಕೆ ಶಮನ ಮಾಡಿಕೊಳ್ಳುವುದು ಅಲ್ಲಿ ಓಡಾಡುವವರ ದಿನನಿತ್ಯದ ಬವಣೆ. ಕೊಚ್ಚುಮಕ್ಕಿಯವರ ಜೀವನದ ಬಹುಭಾಗವೆಲ್ಲ ಈ ಸುಡುಗಾಡು ಪೊದೆಗಳನ್ನು ಕೊಚ್ಚಿ ಕೊಚ್ಚಿ ಹಿಮ್ಮೆಟ್ಟಿಸುವುದರಲ್ಲೇ ಕಳೆಯಬೇಕಾಗುತ್ತಿತ್ತು. ಬೇಸಿಗೆ ಬಂದರಂತೂ

ಮತ್ತೆ ಮಳೆ ಹಿಡಿಯುವವರೆಗೂ ಸದಾ ಕಾಳ್ಗಿಚ್ಚಿನ ಭಯದಲ್ಲಿ ಕಾಲ ಹಾಕುತ್ತಾ ಎಲ್ಲಿ ಹೊಗೆ ಏಳಲಿ, ಎಲ್ಲಿ ಹಸಿ ಎಲೆ ಸುಟ್ಟ ವಾಸನೆ ಬರಲಿ ಕೆಲಸ ಬಿಟ್ಟು ಓಡಿ ಹೋಗಿ ಬೆಂಕಿಗೆ ಬಂದೋಬಸ್ತ್ ಮಾಡಬೇಕಿತ್ತು. ಒಂದು ಸಾರಿ ಕಾಳ್ಗಿಚ್ಚು ಕೈ ಮೀರಿ ಅದರ ಹೊಗೆಯ ರೌಸು ತಾಳಲಾರದೆ ಜನರೆಲ್ಲಾ ಇಡೀ ಊರನ್ನೇ ಖಾಲಿ ಮಾಡಿ ಮೂರು ತಿಂಗಳು ಊರು ಬಿಟ್ಟು ಓಡಿ ಹೋಗಿದ್ದರು. ಸುಟ್ಟು ಬೂದಿಯಾದ ಶ್ಮಶಾನ ಒಂದನ್ನು ನಿರೀಕ್ಷಿಸಿ ಊರವರು ಹಿಂದಿರುಗಿದಾಗ ಅವರಿಗೆ ಅಚ್ಚರಿಯಾಗುವಂತೆ ಗದ್ದೆ ತೋಟ ಮನೆ ಮಠಗಳಿಗೆ ಏನೂ ಆಗಿರಲಿಲ್ಲ. ಆದರೆ ಜಿಗ್ಗಿನ ಕಾಡು ಎಷ್ಟು ಅಭೇದ್ಯವಾಗಿ ಬೆಳೆದಿತ್ತೆಂದರೆ ಹಳುವನ್ನೆಲ್ಲಾ ಕೊಚ್ಚಿ ಕಡಿದು ಊರು ಪತ್ತೆ ಮಾಡಿ ಆಕಾರಕ್ಕೆ ತರಬೇಕಾದರೆ ಊರವರಿಗೆ ಹೆಣ ಬಿದ್ದುಹೋಯ್ತು" (ಮಾಯಾಲೋಕ-೧, ಪುಟ-೧೨೯, ಪ್ರ. ಪುಸ್ತಕ ಪ್ರಕಾಶನ, ಎರಡನೆ ಮುದ್ರಣ-೨೦೦೬, ಲೇ. ಕೆ.ಪಿ.ಪೂರ್ಣಚಂದ್ರ ತೇಜಸ್ವಿ)

ಈ ಚಿತ್ರಣವನ್ನು ನೋಡಿದರೆ ಈಗ ನಡೆಯುವ ಅಭಿವೃದ್ಧಿ ಕೆಲಸಗಳು ಎಲ್ಲಿ ನಡೆಯುತ್ತವೆ? ಯಾರಿಗಾಗಿ ನಡೆಯುತ್ತವೆ? ಎಂಬ ಪ್ರಶ್ನೆಗಳು ಮೂಡುತ್ತವೆ. ಒಂದಿಡೀ ಗ್ರಾಮ ದಿನನಿತ್ಯ ಇಂಥ ನರಕಯಾತನೆ ಅನುಭವಿಸುತ್ತಿದ್ದರೆ ಆಳುವವರು ಕಣ್ಮುಚ್ಚಿ ಕುಳಿತಿದ್ದಾರೆ. ಅಭಿವೃದ್ಧಿ ಹೆಸರಿನಲ್ಲಿ ಬುಡಕಟ್ಟು ಜನರನ್ನು ಒಕ್ಕಲೆಬ್ಬಿಸುವ ಆಡಳಿತಷಾಹಿ ಕಾಡಿನಲ್ಲಿ ಈ ರೀತಿ ಯಾತನೆ ಅನುಭವಿಸುವವರಿಗೆ ಪುನರ್ವಸತಿ ಕಲ್ಪಿಸಲು ಏಕೆ ಪ್ರಯತ್ನಿಸುವುದಿಲ್ಲ. ಕನಿಷ್ಟ ಅದೇ ಗ್ರಾಮಕ್ಕಾದರೂ ರಸ್ತೆ ಕುಡಿಯುವ ನೀರಿನಂಥ ಮೂಲಭೂತ ಸೌಲಭ್ಯವನ್ನಾದರೂ ಒದಗಿಸಲು ಇರುವ ಅಡ್ಡಿಯಾದರೂ ಏನು? ಇದು ನಮ್ಮ ಆಡಳಿತಶಾಷಿಯ ದೊಡ್ಡ ದುರಂತವೇ ಸರಿ.

*****

## ಅಧ್ಯಯನ ಸಾರ

ತೇಜಸ್ವಿ ಕನ್ನಡದ ಅಗ್ರ ಲೇಖಕರಲ್ಲಿ ಒಬ್ಬರು. ಅವರ ಸಾಹಿತ್ಯವೂ ಕನ್ನಡದ ಅಗ್ರ ಸಾಹಿತ್ಯವಷ್ಟೇ ಅಲ್ಲ ವಿಭಿನ್ನ ಕೂಡ. ವಸ್ತುವಿನ ವಿಚಾರದಲ್ಲೂ, ಅಭಿವ್ಯಕ್ತಿ ವಿಚಾರದಲ್ಲೂ ವಿಭಿನ್ನತೆಯನ್ನು ಪಡೆದುಕೊಂಡಿದೆ. ನವಿರು ಹಾಸ್ಯದಿಂದ ಕೂಡಿದ ಸಹಜ ದೇಸಿಶೈಲಿ ತೇಜಸ್ವಿಯವರಿಗೇ ಅನನ್ಯ ಎನಿಸುತ್ತದೆ. ಈ ವಿಶಿಷ್ಟ ಶೈಲಿಯೇ ಸಾವಿರಾರು ಓದುಗರನ್ನು ಅವರತ್ತ ಸೆಳೆಯಿತು ಮಾತ್ರವಲ್ಲ ಹೊಸ ಓದುಗರನ್ನೂ ಸಾಹತ್ಯದ ಕಡೆ ಸೆಳೆಯಿತು.

ಹೆಚ್ಚು ಓದುಗರನ್ನು ತನ್ನತ್ತ ಸೆಳೆದಿದ್ದೆ ತೇಜಸ್ವಿ ಸಾಹಿತ್ಯದ ಶ್ರೇಷ್ಟತೆ ಎಂದು ಭಾವಿಸಿದರೆ ಅದಕ್ಕಿಂತ ಘನಘೋರ ಅಪರಾಧ ಮತ್ತೊಂದಿಲ್ಲ. ತೇಜಸ್ವಿ ವಿಶಿಷ್ಟವಾಗುವುದು ಚಿಂತನಾಕ್ರಮದಲ್ಲಿ ಹಾಗೂ ತಮ್ಮ ಬರವಣಿಗೆಯ ವಸ್ತು ವೈವಿಧ್ಯದಲ್ಲಿ. ತೇಜಸ್ವಿ ಕನ್ನಡ ಸಾಹಿತ್ಯದಲ್ಲಿ ಮೊಟ್ಟಮೊದಲ ಭಾರಿಗೆ ಅಪರಿಚಿತ, ಅನೂಹ್ಯ, ಕುತೂಹಲಭರಿತವಾದ ವಿಷಯಗಳನ್ನು ಸ್ಪರ್ಶಿಸಿದರು. ಅವುಗಳ ವಿಸ್ಮಯವನ್ನು ಕನ್ನಡಿಗರಿಗೆ ತೆರೆದುತೋರಿಸಿದರು. ಅವರ ಬರವಣಿಗೆಯ ಮೇಲೊಮ್ಮೆ ಕಣ್ಣಾಡಿಸಿದರೂ ಸಾಕು ಆ ಸಾಹಿತ್ಯ ರಾಶಿ ನಮ್ಮನ್ನು ಬೆರಗುಗೊಳಿಸತ್ತದೆ. ಅಷ್ಟೇಅಲ್ಲ ಅದನ್ನು ಓದಲೇಬೇಕೆಂಬ ಪ್ರೇರಣೆ ನೀಡುತ್ತದೆ. ಅಷ್ಟು ಆಕರ್ಷಣೀಯ ಅವರ ಬರವಣಿಗೆ.

ಇಷ್ಟು ವೈವಿಧ್ಯತೆಯಿಂದ ಕೂಡಿದ ತೇಜಸ್ವಿ ಬರಹವನ್ನು ಕೇವಲ ಸಾಹಿತ್ಯಕ ದೃಷ್ಟಿಯಿಂದ ನೋಡುವುದು ಸೀಮಿತ ಎನಿಸುತ್ತದೆ. ಸಾಮಾಜಿಕ, ಸಾಹಿತ್ಯಕ, ಸಾಂಸ್ಕೃತಿಕ, ಜೀವ ವೈಜ್ಞಾನಿಕ, ದೃಷ್ಟಿಕೋನಗಳಿಂದ ಅವರ ಬರವಣಿಗೆಯನ್ನು ಚರ್ಚಿಸಬೇಕಿದೆ. ಇಷ್ಟೇಅಲ್ಲ ವಿಮರ್ಶೆಯ ಹೊಸ ಪಂಥವಾಧ ಇಕೋ ಕ್ರಿಟಿಸಿಸಮ್‌ಗೂ ತೇಜಸ್ವಿ ಬಹುಮುಖ್ಯ ಆಕರವಾಗಬಲ್ಲದು. ಕನ್ನಡ ವಿಮರ್ಶೆ ತೇಜಸ್ವಿಯವರ ಕಾದಂಬರಿ ಮತ್ತು ಕಥೆಗಳನ್ನು ಬಿಟ್ಟು ಹೊರಬರಲೇ ಇಲ್ಲ. ಅವರ ವಿಸ್ಮಯ ಮಾಲಿಕೆ, ಮಿಲೇನಿಯಂ ಸರಣಿ, ಮತ್ತು ಪರಿಸರ ಹಾಗೂ ಜೀವವಿಜ್ಞಾನದ ಕೃತಿಗಳನ್ನು ಸ್ಪರ್ಶಿಸಲೇ ಇಲ್ಲ. ಅಷ್ಟರಲ್ಲೇ ತೇಜಸ್ವಿ ಶ್ರೇಷ್ಟತೆಯನ್ನು ಕೊಂಡಾಡುತ್ತಿರುವ ಕನ್ನಡ ವಿಮರ್ಶಾ ಲೋಕ ಅವರ ಸರಣಿಗಳ ಹೊಳಹೊಕ್ಕರೆ ತೇಜಸ್ವಿಯವರನ್ನು ಕನ್ನಡದ ಅತ್ಯಂತ ಶ್ರೇಷ್ಟ ಲೇಖಕರೆಂದು ಗುರ್ತಿಸಲು ಬೇಕಾಗುವ ಎಲ್ಲಾ ಅಂಶಗಳೂ ದೊರಕುತ್ತವೆ ಎಂಬುದು ನನ್ನ ಅಭಿಪ್ರಾಯ. ಏಕೆಂದರೆ ಈ ಸರಣಿಗಳಲ್ಲಿ ಜಗತ್ತಿನ ಅದ್ಭುತಗಳೆಲ್ಲ ಅಡಗಿಕೊಂಡಿವೆ. ಪ್ರಪಂಚದ ಮಹತ್ವದ ಜ್ಞಾನ ಪರಂಪರೆ ಈ ಸರಣಿಯೊಳಗೆ ಸೇರಿಹೋಗಿದೆ. ಇದನ್ನು ಅಭಿವ್ಯಕ್ತಿಸಿರುವ ತೇಜಸ್ವಿ ತಮ್ಮನ್ನು ತಾವು ಇಡೀ ವಿಶ್ವಕ್ಕೆ ಮುಖಾಮುಖಿಯಾಗಿಸಿಕೊಳ್ಳುವುದು ಕಂಡುಬರುತ್ತದೆ. ಅಂದರೆ ಇಡೀ ವಿಶ್ವದ ಜ್ಞಾನ ಪರಂಪರೆಗೆ ಕನ್ನಡದ ನೆಲದಿಂದಲೇ ತೇಜಸ್ವಿ ಪ್ರತಿಕ್ರಿಯೆ ಒಡ್ಡುತ್ತಾರೆ. ಪರಂಪರೆಯನ್ನು ಹೊಸದಾಗಿ ನೋಡಬೇಕಾದ ಅಗತ್ಯವಿರುವ ಇಂದಿನ ಸಂದರ್ಭದಲ್ಲಿ ಈ ಪ್ರತಿಕ್ರಿಯೆ ಅತ್ಯಂತ ಮಹತ್ವದ್ದು. ಇದನ್ನು ಕನ್ನಡ ವಿಮರ್ಶೆ ಸರಿಯಾದ ಕ್ರಮದಲ್ಲಿ ಗುರ್ತಿಸಬೇಕಿದೆ.

ತೇಜಸ್ವಿಯವರ ಜನಪ್ರಿಯ ಕಾದಂಬರಿಗಳಾದ ಕರ್ವಾಲೋ, ಜುಗಾರಿ ಕ್ರಾಸ್, ಹಾಗೂ ಚಿದಂಬರ ರಹಸ್ಯಗಳನ್ನು ವಿಮರ್ಶಕರು ಈಗಾಗಲೇ ಸಾಕಷ್ಟು ಇಂಜಿದ್ದಾರೆ. ಆದರೆ ಕಳೆದ ೨೦೦೬ರಲ್ಲಿ ಮೊದಲ  ಮುದ್ರಣ ಕಂಡ ತೇಜಸ್ವಿಯವರ ಕೊನೆಯ ಕಾದಂಬರಿ ಮಾಯಾಲೋಕದ ಬಗ್ಗೆ ಯಾರೂ ಮಹತ್ವ ಎನ್ನುವಷ್ಟು ಚರ್ಚಿಸಿಲ್ಲ. ಮಾಯಾಲೋಕ ತೇಜಸ್ವಿ ಕಾದಂಬರಿಗಳ ಮುಂದುವರಿಕೆಯೂ ಹೌದು ವಿಭಿನ್ನವೂ ಹೌದು. ಅವರ ಒಟ್ಟು ಚಿಂತನೆ ಇಲ್ಲೂ ಮುಂದುವರಿದಿದೆ. ಆದರೆ ಇದರ ಅಭಿವ್ಯಕ್ತಿ ಕ್ರಮ, ಏಕವಸ್ತು ಅಥವಾ ಪ್ರಧಾನ ವಸ್ತು ಎಂಬ ಕಟ್ಟುಪಾಡಿನಿಂದ ಹೊರಬಂದು ಇದಕ್ಕೊಂದು ವಸ್ತುವೇ ಇಲ್ಲದಂತೆ ಮುಂದುವರಿಯುವ ಧಾಟಿ, ಸಾಮಾಜಿಕತೆಯನ್ನು ಚಿತ್ರಿಸುತ್ತಲೇ ಅದರ ಪರಿಧಿಯನ್ನೂ ದಾಟಿ ಪರಿಸರದ ಮಹಾಕಥನವಾಗಿಬಿಡುವ ಇದರ ವಿನ್ಯಾಸ ಎಲ್ಲವೂ ಅವರ ಹಿಂದಿನ ಕಾದಂಬರಿಗಳಿಗಿಂತ ಭಿನ್ನವಾಗಿ ಕಾಣುತ್ತವೆ. ಹೀಗಾಗಿ ಮಾಯಾಲೋಕದ ಅಧ್ಯಯನ ತೇಜಸ್ವಿ ವ್ಯಕ್ತಿತ್ವದ ಭಿನ್ನ ಕವಲೊಂದನ್ನು ಪರಿಚಯ ಮಾಡಿಕೊಡುವಲ್ಲಿ ಒಂದು ಪ್ರಾಮಾಣಿಕ ಪ್ರಯತ್ನವಾಗುತ್ತದೆ.

ತೇಜಸ್ವಿ ಬರವಣಿಗೆ ಕನ್ನಡದ ಇತರೆ ಲೇಖಕರಿಗಿಂತ 'ಭಿನ್ನ'ವಾಗಿರುವಾಗ ಆ ಬರವಣಿಗೆಯನ್ನು ನೋಡುವ ಕ್ರಮವೂ ಭಿನ್ನವಾಗಬೇಕಾದ ಅಗತ್ಯವಿದೆ. ಆದ್ದರಿಂದ ಜೀವಶಾಸ್ತ್ರ, ಮಾನವಶಾಸ್ತ್ರ ಮತ್ತು ಸಮಾಜಶಾಸ್ತ್ರ ಈ ಶಿಸ್ತುಗಳ ಅಂತರ್‌ಶಿಸ್ತೀಯ ಅಧ್ಯಯನ ಕ್ರಮದಲ್ಲಿ ತೇಜಸ್ವಿ ಬರವಣಿಗೆಯನ್ನು ನೋಡುವ ಅಗತ್ಯವಿದೆ. ಈ ದೃಷ್ಟಿಯಲ್ಲಿ ತೇಜಸ್ವಿಯವರ ಒಟ್ಟು ಬರವಣಿಗೆಯನ್ನು ಅಂತರ್‌ಶಿಸ್ತೀಯ ಅಧ್ಯಯನಕ್ಕೊಳಪಡಿಸುವ ಕ್ರಮವೊಂದು ಪಿಎಚ್‌ಡಿ ವಿದ್ಯಾರ್ಥಿಗೆ ಒಂದು ಅತ್ಯುತ್ತಮ ಸಂಶೋಧನಾ ವಿಷಯವಾಗಬಲ್ಲದು.

*****

## ಪರಾಮರ್ಶನ ಸಾಹಿತ್ಯ:


1 'ತೇಜಸ್ವಿ ಕಥನ'– ಲೇ. ಟಿ.ಪಿ.ಅಶೋಕ, ಪ್ರ. ಅಕ್ಷರ ಪ್ರಕಾಶನ, ಮೊದಲ ಮುದ್ರಣ–೨೦೦೪

2 'ತೇಜಸ್ವಿ'– ಸಂ. ಡಾ.ಎಂ.ಬೈರೇಗೌಡ, ಬಿ.ಆರ್.ಸತ್ಯನಾರಾಯಣ, ಪ್ರ. ಕೆ.ಎಸ್.ಮುದ್ದಪ್ಪ ಸ್ಮಾರಕ ಟ್ರಸ್ಟ್, ಮೊದಲ ಮುದ್ರಣ–೨೦೦೬

3 'ತೇಜಸ್ವಿ ನೆನಪು'– ಸಂ. ಬಿ.ಚಂದ್ರೇಗೌಡ, ಬಿ.ಎಲ್.ರಾಜು, ಪ್ರ. ರಂಗಭಾರತಿ, ಮೊದಲ ಮುದ್ರಣ–೨೦೦೭

4 'ಸಮುದಾಯ ವಾರ್ತಾ ಪತ್ರ' (ಕನ್ನಡ ಮಾಸಿಕ ಪತ್ರಿಕೆ) ಸಂ. ಎಚ್.ವಿ.ವೇಣುಗೋಪಾಲ್, ಸಂಪುಟ ೧, ಸಂಚಿಕೆ ೫, ಫೆಬ್ರವರಿ–೨೦೦೭


*****

# ಅನುಬಂಧ

## ತೇಜಸ್ವಿ ಬರಹ-ಪ್ರಶಸ್ತಿಗಳು

**ಕಾದಂಬರಿಗಳು:**

೧. ಕರ್ವಾಲೋ(೧೯೮೦)
೨. ಚಿದಂಬರ ರಹಸ್ಯ(೧೯೮೫)
೩. ಜುಗಾರಿ ಕ್ರಾಸ್(೧೯೯೪)
೪. ಮಾಯಾಲೋಕ(೨೦೦೫)

**ಕಿರು ಕಾದಂಬರಿಗಳು:**

೧. ಸ್ವರೂಪ(೧೯೬೬)
೨. ನಿಗೂಢ ಮನುಷ್ಯರು(೧೯೭೩)

**ಕಥಾ ಸಂಕಲನಗಳು:**

೧. ಹುಲಿಯೂರಿನ ಸರಹದ್ದು (೧೯೬೨)
೨. ಅಬಚೂರಿನ ಪೋಸ್ಟಾಫೀಸು(೧೯೭೩)
೩. ಕುಬಿ ಮತ್ತು ಇಯಾಲ
೪. ಕಿರಗೂರಿನ ಗಯ್ಯಾಳಿಗಳು(೧೯೯೧)

**ಕವನ ಸಂಕಲನ :**

೧. ಸೋಮುವಿನ ಸ್ವಗತ ಲಹರಿ(೧೯೬೨)

**ನಾಟಕ:**

೧. ಯಮಳ ಪ್ರಶ್ನೆ (೧೯೬೪):

**ಪ್ರವಾಸ ಕಥನ:**

೧. ಅಲೆಮಾರಿಯ ಅಂಡಮಾನ್ ಮತ್ತು ಮಹಾನದಿ ನೈಲ್: (೧೯೯೦)

**ವೈಚಾರಿಕ ಬರಹ:**

೧. ವ್ಯಕ್ತಿ ವಿಶಿಷ್ಟ ಸಿದ್ಧಾಂತ(೧೯೬೪)

**ಜೀವನ ಚರಿತ್ರೆ/ಆತ್ಮ ಚರಿತ್ರೆ**

೧. ಅಣ್ಣನ ನೆನಪು

**ಪರಿಸರ ಮತ್ತು ಜೀವವಿಜ್ಞಾನ.**

೧. ಪರಿಸರದ ಕಥೆ (೧೯೯೦)
೨. ಏರೋಪ್ಲೇನ್ ಚಿಟ್ಟೆ ಮತ್ತು ಇತರ ಕಥೆಗಳು (೧೯೯೩)
೩. ಕಿರಿಯರಿಗಾಗಿ ಪರಿಸರ (೧೯೬೨)
೪. ಸಹಜ ಕೃಷಿ (೧೯೯೨)
೫. ದಕ್ಷಿಣ ಭಾರತದ ಹಕ್ಕಿಗಳು
೬. ಮಿಂಚುಳ್ಳಿ (ಕನ್ನಡ ನಾಡಿನ ಹಕ್ಕಿಗಳು ಭಾಗ-೧) (೧೯೯೪)
೭. ಹೆಜ್ಜೆ ಮೂಡದ ಹಾದಿ(ಕನ್ನಡ ನಾಡಿನ ಹಕ್ಕಿಗಳು ಭಾಗ-೨)(೧೯೯೬)
೮. ಹಕ್ಕಿಪುಟ್ಟ(೧೯೯೭)
೯. ನಡೆಯುವ ಕಡ್ಡಿ! ಹಾರುವ ಎಲೆ (ಹುಳಗಳ ಕೋಶ-೧)

**ಅನುವಾದಗಳು:**

**೧.** ಕಾಡಿನ ಕಥೆಗಳು ಭಾಗ ೧ (೧೯೯೩)
**೨.** ಕಾಡಿನ ಕಥೆಗಳು ಭಾಗ ೨ (೧೯೯೩)
**೩.** ಕಾಡಿನ ಕಥೆಗಳು ಭಾಗ ೩ (೧೯೯೪)
**೪.** ಕಾಡಿನ ಕಥೆಗಳು ಭಾಗ ೪ (೧೯೯೪)
**೫.** ರುದ್ರ ಪ್ರಯಾಗದ ಭಯಾನಕ ನರಭಕ್ಷಕ(೧೯೯೫)
**೬.** ಲೋಹಿಯಾ

**ಸಂಶೋಧನಾತ್ಮಕ ವೈಜ್ಞಾನಿಕ ಬರವಣಿಗೆ:**

೧. ಮಿಸ್ಸಿಂಗ್ ಲಿಂಕ್(೧೯೯೧)
೨. ಫ್ಲೈಯಿಂಗ್ ಸಾಸರ್ಸ್ ಭಾಗ-೧(೧೯೯೩)
೩. ಫ್ಲೈಯಿಂಗ್ ಸಾಸರ್ಸ್ ಭಾಗ-೨(೧೯೯೩)
೪. ವಿಸ್ಮಯ ಭಾಗ-೧(೧೯೯೪)
೫. ವಿಸ್ಮಯ ಭಾಗ-೨(೧೯೯೩)
೬. ವಿಸ್ಮಯ ಭಾಗ-೩(೧೯೯೪)

**ಮಿಲೆನಿಯಂ ಸರಣಿ:**

೧. ಹುಡುಕಾಟ(ಮಿಲೆನಿಯಂ-೧)
೨. ಜೀವನ ಸಂಗ್ರಾಮ(ಮಿಲೆನಿಯಂ-೨)

೩. ಫೆಸಿಫಿಕ್ ದ್ವೀಪಗಳು(ಮಿಲೆನಿಯಂ-೩)
೪. ಚಂದ್ರಚೂರು(ಮಿಲೆನಿಯಂ-೪)
೫. ನೆರೆಹೊರೆಯ ಗೆಳೆಯರು(ಮಿಲೆನಿಯಂ-೫)
೬. ಮಹಾಯುದ್ಧ-೧(ಮಿಲೆನಿಯಂ-೬)
೭. ಮಹಾಯುದ್ಧ-೨(ಮಿಲೆನಿಯಂ-೭)
೮. ಮಹಾಯುದ್ಧ-೩(ಮಿಲೆನಿಯಂ-೮)
೯. ದೇಶ ವಿದೇಶ-೧(ಮಿಲೆನಿಯಂ-೯)
೧೦ ದೇಶದೇಶ-೨ (ಮಿಲೆನಿಯಂ-೧೦)
೧೧. ದೇಶ ವಿದೇಶ-೩(ಮಿಲೆನಿಯಂ-೧೧)
೧೨. ದೇಶ ವಿದೇಶ-೪(ಮಿಲೆನಿಯಂ-೧೨)
೧೩. ವಿಸ್ಮಯ ವಿಶ್ವ-೧(ಮಿಲೆನಿಯಂ-೧೩)
೧೪. ಮಹಾಪಲಾಯನ(ಮಿಲೆನಿಯಂ-೧೪)
೧೫. ವಿಸ್ಮಯ ವಿಶ್ವ-೨(ಮಿಲೆನಿಯಂ-೧೫)
೧೬. ಅಡ್ವೆಂಚರ್(ಮಿಲೆನಿಯಂ-೧೬)
೧೭. ಪ್ಯಾಪಿಲಾನ್ ಭಾಗ-೧ ಮತ್ತು ಭಾಗ-೨

**ಪ್ರಶಸ್ತಿ-ಪುರಸ್ಕಾರಗಳು:**

ಪ್ರಜಾವಾಣಿ ಕಥಾ ಪ್ರಶಸ್ತಿ (ಲಿಂಗಬಂಧ)
ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ (ಕರ್ವಾಲೋ)
ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ (ಕರ್ವಾಲೋ)
ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ (ಚಿದಂಬರ ರಹಸ್ಯ)
ಭಾರತೀಯ ಭಾಷಾ ಪರಿಷತ್ ಪ್ರಶಸ್ತಿ
ಕರ್ನಾಟಕ ಅಕಾಡೆಮಿ ಪ್ರಶಸ್ತಿ(ಅಲೆಮಾರಿಯ ಅಂಡಮಾನ್ ಮತ್ತು ಮಹಾನದಿ ನೈಲ್)
ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ(ಪರಿಸರದ ಕಥೆ)
ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ(ಕಿರಗೂರಿನ ಗಯ್ಯಾಳಿಗಳು)
ಶಿವರಾಮ ಕಾರಂತ ಪ್ರಶಸ್ತಿ(ಮಿಸ್ಸಿಂಗ್ ಲಿಂಕ್)
ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ(ಕಾಡಿನ ಕಥೆಗಳು ಭಾಗ-೨)
ಕಥಾ ಪ್ರಶಸ್ತಿ ('ಮಾಯಾಮೃಗ' ಕಥೆ)

ಕರ್ನಾಟಕ ಸರ್ಕಾರದ ಪರಿಸರ ಪ್ರಶಸ್ತಿ
ಕನ್ನಡ ರಾಜ್ಯೋತ್ಸವ ಪ್ರಶಸ್ತಿ
ಕರ್ನಾಟಕ ಸಾಹಿತ್ಯ ಅಕಾಡೆಮಿ ಗೌರವ ಪ್ರಶಸ್ತಿ
ಸಂದೇಶ ಕನ್ನಡ ಸಾಹಿತ್ಯ ಪ್ರಶಸ್ತಿ

ಪಂಪ ಪ್ರಶಸ್ತಿ
ತಬರನ ಕಥೆ, ಕುಬಿ ಮತ್ತು ಇಯಾಲ, ಅಬಚೂರಿನ ಪೋಸ್ಟಾಫೀಸು ಕಥೆಗಳು
ಚಲನಚಿತ್ರಗಳಾಗಿ ರಾಜ್ಯ ಮತ್ತು ರಾಷ್ಟ್ರ ಮಟ್ಟದ ಪ್ರಶಸ್ತಿಗಳು.
ಅತ್ಯುತ್ತಮ ಕಥಾ ಲೇಖಕ ಪ್ರಶಸ್ತಿಗಳು

******

